# ಸಿದ್ಧಗಂಗಾ



# ಕ್ಷೇತ್ರ ದರ್ಶನ

ಏಪ್ರಿಲ್, ೧೯೭೪

## ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ನಿತ್ಯರುದ್ರಾಭಿಷೇಕ ಸಮಿತಿ,
## ಶ್ರೀ ಸಿದ್ಧಗಂಗಾ ಕ್ಷೇತ್ರ.

### ಪ್ರಕಟಣೆ

ಮೇಲ್ಕಂಡ ಸಮಿತಿಯವರು ಶ್ರೀ ಸ್ವಾಮಿಯವರ ನಿತ್ಯರುದ್ರಾಭಿಷೇಕದ ಪ್ರಾರಂಭೋತ್ಸವವನ್ನು ತಾ|| **10-5-78** ನೇ ಬುಧವಾರ ಬೆಳಿಗ್ಗೆ **5** ಘಂಟೆಗೆ ನಡೆಸುವವರಿದ್ದಾರೆ. ಈ ಕಾರ್ಯಕ್ರಮದ ಅಂಗವಾಗಿ ಆ ದಿನದ ಅಧ್ಯಕ್ಷತೆಯನ್ನು ಶ್ರೀ ಶಿವಕುಮಾರ ಸ್ವಾಮಿಗಳವರು ನಡೆಸಲು ಒಪ್ಪಿಕೊಂಡಿರುತ್ತಾರೆ. ಶ್ರೀ ಸ್ವಾಮಿಗಳವರಿಂದ ನಿತ್ಯರುದ್ರಾಭಿಷೇಕದ ಅನಾವರಣ ಮಹೋತ್ಸವವು ಆ ದಿನವೇ ನೆರವೇರಿಸಲ್ಪಡುವುದು. ತಾವುಗಳು ಈ ಸಂದರ್ಭದಲ್ಲಿ ಭಾಗವಹಿಸಿ ಶ್ರೀ ಸಿದ್ಧಲಿಂಗೇಶ್ವರಸ್ವಾಮಿಯ ಕೃಪಾಶೀರ್ವಾದವನ್ನು ಪಡೆಯಬೇಕಾಗಿ ವಿನಂತಿ.

ಕಾರ್ಯದರ್ಶಿ
ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ನಿತ್ಯರುದ್ರಾಭಿಷೇಕ ಸಮಿತಿ,
ಶ್ರೀ ಸಿದ್ಧಗಂಗಾ ಕ್ಷೇತ್ರ.

---

## 'ಸಿದ್ಧಗಂಗಾ' ಚಿರಾಯುವಾಗಲೆಂದು
### ಹರಸಿ ಹಾರೈಸಿರುವ ಆಜೀವ ಸದಸ್ಯರ ಬಳಗ

413 ಶ್ರೀ ಹೆಚ್. ಸೋಮರೆಡ್ಡಿ, ಜೆ. ಬಿ. ಹಳ್ಳಿ, ಮೊಳಕಾಲ್ಮುರ ತಾ|| ಚಿತ್ರದುರ್ಗ ಜಿಲ್ಲೆ.

414 ಶ್ರೀ ಬಿ ಸಿ. ಕುಮಾರರೆಡ್ಡಿ, ಜೆ. ಬಿ. ಹಳ್ಳಿ, ಮೊಳಕಾಲ್ಮುರ ತಾ|| ಚಿತ್ರದುರ್ಗ ಜಿಲ್ಲೆ

415 ಶ್ರೀ ಚಿನ್ನಬಸಣ್ಣ S/o ಕರಿಯಪ್ಪ ಜೆ. ಬಿ ಹಳ್ಳಿ ಮೊಳಕಾಲ್ಮುರ ತಾ|| ಚಿತ್ರದುರ್ಗ ಜಿಲ್ಲೆ.

416 ಶ್ರೀ ಬಿ. ವೀರಣ್ಣ ಜೆ. ಬಿ. ಹಳ್ಳಿ, ಮೊಳಕಾಲ್ಮುರ ತಾ|| ಚಿತ್ರದುರ್ಗ ಜಿಲ್ಲೆ.

417 ಶ್ರೀ ಗುರುಸಿದ್ದಪ್ಪ ( ಹತ್ತಿಗುಡ್ಡ ) ಪಕ್ಕುರ್ತಿ ಮೊಳಕಾಲ್ಮುರ ತಾ|| ಚಿತ್ರದುರ್ಗ ಜಿಲ್ಲೆ.

418 ಶ್ರೀ ಜಿ.ಟಿ, ಸಿದ್ದಣ್ಣ, ಪಕ್ಕುರ್ತಿ, ಮೊಳಕಾಲ್ಮುರ ತಾ|| ಚಿತ್ರದುರ್ಗ ಜಿಲ್ಲೆ.

419 ಶ್ರೀ ಆರ್ ಎಚ್. ಗಂಗಾಧರಪ್ಪ, ಕಂಟ್ರಾಕ್ಟರ್ ರಾಂಪುರ, ಮೊಳಕಾಲ್ಮುರ ತಾ|| ಚಿತ್ರದುರ್ಗ ಜಿಲ್ಲೆ.

420 ಶ್ರೀಮತಿ ಕೆ. ಜಯಲಕ್ಷ್ಮಮ್ಮ W/O ಶ್ರೀ ನಾರಾಯಣಪ್ಪ, ಶಿಕ್ಷಕರು, ದೇವನಹಳ್ಳಿ, ಬೆಂಗಳೂರು ಜಿಲ್ಲೆ.

421 ಶ್ರೀ ಆರ್ ಎಸ್. ಸದಾನಂದ ಶಿಕ್ಷಕರು, ಹೈಯರ್ ಸೆಕೆಂಡರಿ ಸ್ಕೂಲ್ ಶ್ರೀ ಸಿದ್ಧಗಂಗಾಮಠ, ತುಮಕೂರು ಜಿಲ್ಲೆ.



## ಶ್ರೀವಾಣಿ

ಭಾರತದ ಪ್ರಾಚೀನ ಶಿಕ್ಷಣ ಪದ್ಧತಿಯು ಗುರುವಿಗೆ ಮಹತ್ತರವಾದ ಸ್ಥಾನವನ್ನು ದೊರಕಿಸಿಕೊಟ್ಟಿತ್ತು. ಸಮಾಜವೂಕೂಡ ಆತನನ್ನು ತುಂಬು ಗೌರವಾದಾರಗಳಿಂದ ಕಾಣುತ್ತಿತ್ತು. ಗುರುವಾದವನೂಕೂಡ ತಾನು ಕೇವಲ ಅರ್ಥೋಪಜೀವಿಯಾಗಿರದೆ ಸಮಾಜದ ಗೌರವವನ್ನು ಸಂಪಾದಿಸಿಕೊಂಡು ತನ್ನ ಕರ್ತವ್ಯವನ್ನು ನಿಷ್ಠೆಯಿಂದ ನಿರ್ವಂಚನೆಯಿಂದ ನಿರ್ವಹಿಸುತ್ತಿದ್ದ. ಅವನು ಗುರು ಎಂಬ ಹೆಸರಿಗೆ ಪೂರ್ಣಪಾತ್ರನೆನಿಸುತ್ತಿದ್ದ. ಗುರುವೆಂಬ ಶಬ್ದಕ್ಕೆ 'ಗು ಶಬ್ದಾತ್' ಅಜ್ಞಾನಾಂಧಕಾರದಿಂದ ಬೆಳಕಿನತ್ತ ಒಯ್ಯುವವನೇ ಗುರು ಎಂಬುದು ನಮ್ಮ ಆರ್ಯವಾಣಿ ಕೊಟ್ಟ ವ್ಯಾಖ್ಯಾನ. Guru lead the students from the Drakness of ingnorent to the light of knowledge ಅವನು ವಿದ್ಯಾದಾನಮಾಡುವುದರ ಜೊತೆಗೆ ಇಡೀ ಸಮಾಜವನ್ನೇ ಸುಧಾರಿಸುತ್ತಿದ್ದ. ಹೀಗೆ ಅವನೊಬ್ಬ ಸಮಾಜ ಸುಧಾರಕನಾಗಿ, ನ್ಯಾಯಮೂರ್ತಿಯಾಗಿ, ಸಮಾಜದ ಕೇಂದ್ರಬಿಂದುವಾಗಿ ಸಾರ್ಥಕ ಜೀವನವನ್ನು ಸಾಗಿಸಬೇಕಾದರೆ, ಅತನ ಬಾಳಿನ ತತ್ವವಾವುದು ಎಂದು ಪ್ರಶ್ನಿಸಿಕೊಂಡಾಗ ಅದಕ್ಕೆ Plain living; high thinking ಸರಳಜೀವನ ಉನ್ನತ ಆಲೋಚನೆ ಇವೇ ಅವನ ಬಾಳಿನ ಸೂತ್ರಗಳೆಂಬುದಾಗಿದೆ. ಉತ್ತರ ಕೊಡಬಹುದಾಗಿದೆ. ಆದರೆ ಬಹುಮಂದಿ ಉಪಾಧ್ಯಾಯರಲ್ಲಿ ಇಂದು ಈ ಒಂದುತತ್ವ ವಿಪರ್ಯಾಸವನ್ನು ಪಡೆಯುತ್ತಾ ಬಂದಿದೆ.

ಒಟ್ಟಿನಲ್ಲಿ ಉಪಾಧ್ಯಾಯನಾದವನು ಸಮಾಜದ ಗೌರವವನ್ನು ಸಂಪಾದಿಸಬೇಕಾದರೆ ಆದರ್ಶ ಮತ್ತು ಸರಳ ಜೀವನದಿಂದ ಮಾತ್ರ ಸಾಧ್ಯ.

# ‘ಸಿದ್ಧಗಂಗಾ’

ಏಪ್ರಿಲ್, ೧೯೭೮

ಸಂಪುಟ-೧೪ ಸಂಚಿಕೆ- ೪

ಪ್ರಕಾಶಕರು
ಹೆಚ್. ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಸಂಘದ ಪರವಾಗಿ

ಸಂಪಾದಕ ಮಂಡಲಿ
ಪಂ॥ ಚನ್ನಪ್ಪ ಎರೇಸೀಮೆ
ಪಿ. ಎನ್. ಚಂದ್ರಶೇಖರಯ್ಯ
ವಿರೂಪಾಕ್ಷಯ್ಯ
ಬಸವರಾಜು

ಜಾಹಿರಾತು ವ್ಯವಸ್ಥಾಪಕರು
ಎಂ. ರೇಣುಕಾರಾಧ್ಯ

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ

ಪ್ರಕಟನೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ

ಆಜೀವ ಸದಸ್ಯತ್ವ: **151-00** ರೂ

ವಾರ್ಷಿಕ ಚಂದಾ: **10-00** ರೂ

## ಈ ಸಂಚಿಕೆಯಲ್ಲಿ



### ಮುಖಪುಟ

ಕೈಲಾಸದಂತೆ ರಾರಾಜಿಸುತ್ತಿರುವ ಸಿದ್ಧಗಂಗಾ ಕ್ಷೇತ್ರ ದರ್ಶನಕ್ಕಾಗಿ ದಿನ ನಿತ್ಯ ಸಹಸ್ರಾರು ಭಕ್ತಾಧಿಗಳು ಭೇಟಿ ಕೊಡುತ್ತಾರೆ.

### ಲೇಖಕರಲ್ಲಿ ಮನವಿ

‘ಸಿದ್ಧಗಂಗಾ’ ಲೇಖಕರಿಂದ ಧಾರ್ಮಿಕ, ಸಾಂಸ್ಕೃತಿಕ ಐತಿಹಾಸಿಕ ಹಾಗೂ ವೈಚಾರಿಕ ಲೇಖನಗಳು, ಸಣ್ಣಕಥೆ, ಕವನ, ಪ್ರಬಂಧ ಇವುಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್‌ಸ್ಕೇಪ್ ಸೈಜಿನ 3 ಪುಟಗಳಿಗೆ ಮೀರದಂತಿದ್ದು ಕಾಗದದ ಒಂದೇ ಮಗ್ಗುಲಲ್ಲಿ ಬರೆಯಲ್ಪಟ್ಟಿರಬೇಕು. ಅಸ್ವೀಕೃತ ಲೇಖನಗಳನ್ನು ಹಿಂದಿರುಗಿಸಲಾಗುವುದಿಲ್ಲ. ಸ್ವೀಕೃತ ಲೇಖನಗಳಿಗೆ ‘ಸಿದ್ಧಗಂಗಾ’ ಆಗಿಂದಾಗ್ಗೆ ನಿಗದಿಪಡಿಸಿಕೊಳ್ಳುವ ಸಂಭಾವನೆಯನ್ನು ನೀಡಲಾಗುವುದು. ಲೇಖನಗಳನ್ನು

“ಸಂಪಾದಕರು”

“ಸಿದ್ಧಗಂಗಾ” [ಕನ್ನಡ ಮಾಸ ಪತ್ರಿಕೆ]

ಶ್ರೀ ಸಿದ್ಧಗಂಗಾ ಕ್ಷೇತ್ರ-572131 ತುಮಕೂರು ಜಿಲ್ಲೆ

ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.

### ಚಂದಾದಾರರಲ್ಲಿ ಮನವಿ

ಹೊಸ ವರ್ಷದ ನಿಮ್ಮ ಚಂದಾ ನಂಬರ್ ಗುರುತಿಸಿ ಕೊಳ್ಳಿ. ಚಂದಾ ಅವಧಿ ಮುಗಿಯುವವರೆಗೆ ವಿಳಾಸ ಬದಲಾವಣೆ ಮತ್ತು ಇತರೆ ಬಗ್ಗೆ ವ್ಯವರಿಸುವಾಗ ನಿಮ್ಮ ವಿಳಾಸದ ಹಿಂಬದಿ ಇರುವ ಚಂದಾ ನಂಬರ್ ಅಥವಾ ಯಾರ ಮೂಲಕ ಸದಸ್ಯತ್ವ ಪಡೆದಿರುವಿರೋ ಆ ನಮ್ಮ ಪ್ರತಿನಿಧಿಗಳ ಹೆಸರನ್ನು ಸೂಚಿಸಿ ವ್ಯವಹರಿಸಿ.

ಚಂದಾ ಬಾಕಿ ಇರುವವರು ಸಂದಾಯ ಮಾಡಿ ‘ಸಿದ್ಧಗಂಗಾ’ ಮುನ್ನಡೆಗೆ ಸಹಕರಿಸಿ.

ಚಂದಾ ಅವಧಿ ಮುಗಿದಿರುವ ಮಾನ್ಯ ಓದುಗರು ಮುಂದಿನ ಸಾಲಿಗೆ ಮುಂದುವರಿಸಿಕೊಳ್ಳಬೇಕಾಗಿ ಪ್ರಾರ್ಥನೆ.

ಪ್ರಕಾಶಕರು

‘ಸಿದ್ಧಗಂಗಾ’ ಮಾಸ ಪತ್ರಿಕೆ, ಸಿದ್ಧಗಂಗಾ ಮಠ-572131 ತುಮಕೂರು ಜಿಲ್ಲೆ

# ನವನೀತ

(ಸಂಸ್ಕೃತ ಶ್ಲೋಕಗಳ ಭಾವಾನುವಾದ)

**ಸರ್ವದ್ರವ್ಯೇಷು ವಿದ್ಯೈವ ದ್ರವ್ಯಮಾಹುರನುತ್ತಮಮ್ ।**
**ಅಹಾರ್ಯತ್ವಾದನರ್ಘತ್ವಾದಕ್ಷಯತ್ವಾಚ್ಚ ಸರ್ವದಾ ॥**

ಎಲ್ಲ ದ್ರವ್ಯಗಳಲ್ಲಿ ವಿದ್ಯೆ ತಾನೊಂದು
ಉತ್ಕೃಷ್ಟ ದ್ರವ್ಯವೆಂದೆನಿಸುವುದು
ಕಳವಾಗಲಾರದದು, ಬೆಲೆ ಬಾಳ್ವುದು;
ಬಳಸಿದರೆ ಬೆಳೆವುದದು ಖರ್ಚಾಗದು.

**ವಿದ್ಯಾ ದದಾತಿ ವಿನಯಂ ವಿನಯಾದ್ಯಾತಿ ಪಾತ್ರತಾಮ್ ।**
**ಪಾತ್ರತ್ವಾದ್ಧನಮಾಪ್ನೋತಿ ಧನಾದ್ಧರ್ಮಂ ತತಃ ಸುಖಮ್ ॥**

ವಿದ್ಯೆ ತಾ ನೀಡುವುದು ವಿನಯವನ್ನು;
ವಿನಯದಿಂದರ್ಹತೆಯ ಗಳಿಸಬಹುದು;
ಹಣಗಳಿಸಲರ್ಹತೆಯು ಮೂಲಧನವು;
ಧನದಿಂದ ಧರ್ಮ, ಆಮೇಲೆ ಸುಖವು.

**ವಿದ್ಯಾ ಶಸ್ತ್ರಂಚ ಶಾಸ್ತ್ರಂಚದ್ವೇ ವಿದ್ಯೇ ಪ್ರತಿಪತ್ತಯೇ ।**
**ಆದ್ಯಾ ಹಾಸ್ಯಾಯ ವೃದ್ಧತ್ವೇ ದ್ವಿತೀಯಾದ್ರಿಯತೇ ಸದಾ ॥**

ವಿದ್ಯೆಯೊಳಗಿಬ್ಬಗೆಯು ಕೇಳು ಮಿತ್ರ
ಶಸ್ತ್ರ ವಿದ್ಯೆಯು ಒಂದು, ಇನ್ನೊಂದು ಶಾಸ್ತ್ರ.
ಮುಪ್ಪಿನಲಿ ನಗೆಪಾಟಲಸ್ತ್ರ ವಿದ್ಯೆ
ಒಪ್ಪುವುದು ಎಂದೆಂದು ಶಾಸ್ತ್ರ ವಿದ್ಯೆ

—‘ಕಾವ್ಯಸುಧಾಪ್ರಿಯ’

# ಅಮೃತ ಬಿಂದು

“ಚಕ್ರಾರ ಪಂಕ್ತಿರಿವ ಗಚ್ಛತಿ ಭಾಗ್ಯ ಪಂಕ್ತಿಃ”—ಚಕ್ರದ ಅರೆಕೋಲಿನಂತೆ ಮೇಲ್ಭಾಗದ್ದು ಕೆಳಭಾಗಕ್ಕೆ ಕೆಳಭಾಗದ್ದು ಮೇಲಕ್ಕೆ ತಿರುಗಿದಾಗ ಬದಲಾಯಿಸುತ್ತದೆ. ಅಂತೆಯೇ ಅದೃಷ್ಟಚಕ್ರ. ಅಂದರೆ ದರಿದ್ರ ಧನಿಕನಾಗಬಹುದು. ಧನಿಕ ದರಿದ್ರನಾಗಬಹುದು. ಸುಖಿ ದುಃಖಿಯಾಗಬಹುದು. ದುಃಖಿ ಸುಖಿಯಾಗಬಹುದು. ಈ ರೀತಿಯ ಬದಲಾವಣೆ ಅನಿವಾರ್ಯ. ವ್ಯಕ್ತಿ ಈ ರೀತಿಯ ಬದಲಾವಣೆಯನ್ನು ವಿವೇಕವುಳ್ಳವನಾಗಿ ವಿಚಾರ ಮಾಡಬೇಕಾಗುತ್ತದೆ. ಹಾಗೆ ವಿಚಾರವಂತನಾಗದಿದ್ದಾಗ ಮನಸ್ಸಿನ ನೆಮ್ಮದಿಗೆ ಭಂಗ ತಂದುಕೊಂಡು ತನ್ನ ನಾಶಕ್ಕೆ ತಾನೇ ಕಾರಣನಾಗುತ್ತಾನೆ. ಪ್ರಕೃತಿಯನ್ನವಲಂಬಿಸಿದ ಎಲ್ಲರೂ ಎಲ್ಲ ವ್ಯಕ್ತಿಗಳೂ ಸುಖ ದುಃಖಾದಿಗಳಿಗೆ ಭಾಗಿಗಳಾಗಲೇಬೇಕು. ಮಳೆ, ಚಳಿ, ಮೊದಲಾದ ಋತುಧರ್ಮದ ಹೊಡೆತಕ್ಕೆ ಸಿಕ್ಕಿ ಸಹಿಸಿಕೊಂಡ ಭೂಮಿ ಹಚ್ಚ ಹಸಿರಿನ ಸಿರಿ ಮನೆಯಾಗುತ್ತದೆ. “ಕ್ಷಮಯಾ ಧರಿತ್ರಿ” ಎನ್ನುವ ಹೊಗಳಿಕೆಗೂ ಭಾಗಿಯಾಗಿದೆ. ಅಂತೆಯೇ ಸುಖ-ದುಃಖ, ಸಾವು-ನೋವುಗಳು ಬಂದೇಬರುತ್ತವೆಂದು ತಿಳಿದು, ಎಲ್ಲವನ್ನು ಸಮನಾಗಿ, ಸಮಪ್ರಮಾಣಲ್ಲಿ ಸಹಿಸಿದವನೇ ಭೂಮಿ ತೂಕದ ಮನುಷ್ಯ ಸಂಯಮಿ, ಸಹನಾಶೀಲ ವ್ಯಕ್ತಿ. ಅವನ ತಾಳ್ಮೆ ದೊಡ್ಡದು, ಈ ಉದಾತ್ತ ತತ್ತ್ವದ ತಿಳಿವಳಿಕೆಯ ಸಂಕೇತವೇ ಯುಗಾದಿಯಂದು ಸೇವಿಸುವ ಬೇವು-ಬೆಲ್ಲ.

.—‘ದುಂಬಿ’

# ದಾರ್ಶನಿಕ ಕವಿ ನಿಜಗುಣ ಶಿವಯೋಗಿ

– ಟಿ. ಡಿ. ರಂಗಸ್ವಾಮಿ.

ನಿಜಗುಣ ಶಿವಯೋಗಿಗಳು ಕನ್ನಡ ನಾಡಿನ ಮಹಾನ್ ದಾರ್ಶನಿಕರು. ಅವರು ಮೊದಲು ಮಹಾರಾಜರಾಗಿದ್ದು, ಸಂಸಾರಿಯಾಗಿದ್ದು, ವೈರಾಗ್ಯದಿಂದ ಕೊನೆಗೆ ಮಹಾಯೋಗಿಗಳಾಗಿ, ಬುದ್ಧಿಜೀವಿಗಳಾಗಿ ಮೆರೆದರು. ಅವರ ಸಾಧನಾ ಪಥದಲ್ಲಿ ಹಾದುಹೋದ ಅನೇಕ ಘಟನಾವಳಿಗಳೊಂದಿಗೆ ಅವರ ವ್ಯಕ್ತಿತ್ವವನ್ನು ಮಾನ್ಯ ಲೇಖಕರು ಓದುಗರ ಮುಂದಿಟ್ಟಿದ್ದಾರೆ. –ಸಂ.

ನಿಜಗುಣ ಶಿವಯೋಗಿಯವರು ಕನ್ನಡ ನಾಡಿನ ಮಹಾನ್ ದಾರ್ಶನಿಕರಲ್ಲಿ ಒಬ್ಬರಾಗಿದ್ದಾರೆ. ಇವರು ಮೊದಲು ಗೃಹಸ್ಥರೂ, ರಸಿಕರೂ, ಭೋಗಜೀವಿಯೂ, ಮಹಾರಾಜರೂ ಆಗಿದ್ದುಂಟು. ಮೈಸೂರು ಜಿಲ್ಲೆಯ ಕೊಳ್ಳೇಗಾಲದ ಚಿಲಕವಾಡಿ ಪ್ರಾಂತಕ್ಕೆ ಇವರು ಮೊದಲು ಮಹಾರಾಜರೂ ಆಗಿದ್ದರು. ರಾಜನಾಗಿ, ಶಿವಭಕ್ತನಾಗಿ, ಭಕ್ತಾಗ್ರೇಸರನಾಗಿ, ಪ್ರಜಾಪ್ರೇಮಿಯಾಗಿ ಅವರು ಬಾಳಿದರು. ಆದರೆ ಶಿವಯೋಗಿಯಾಗಿಯೇ ಇವರ ಜೀವನವಾಹಿನಿ ತುಂಬುಹೊಳೆಯಾಗಿ ಮುಂದೆ ಸಾರ್ಥಕತೆಯ ಹಾದಿಯಲ್ಲಿ ಸಾಗಿ ನಾಡಿನ ಕಲ್ಯಾಣಕ್ಕೆ ಕಾರಣವಾಯಿತು. ಲೌಕಿಕದ ಸುಖವು ನಶ್ವರವೆಂಬುದನ್ನು ತಿಳಿಯಲೂ, ವಿರಕ್ತರಾಗಲೂ ಇವರಿಗೆ ಹೆಚ್ಚು ಕಾಲ ಬೇಕಾಗಲಿಲ್ಲ. ಈ ವಿಧವಾದ ಸಂಸಾರಕ್ಕೆ ಅವರ ಜೀವನದಲ್ಲಿಯೇ ಮೊದಲಿನಿಂದ ಸೂಕ್ತ ತಳಪಾಯವಿದ್ದುದು ಕಾಣಬರುತ್ತದೆ. ನೆರೆಯ ರಾಜರುಗಳೊಂದಿಗೆ ಪರಸ್ಪರ ಸೌಹಾರ್ದತೆಯಿಂದಲೇ ಬಾಳಬೇಕೆಂಬುದನ್ನೂ, ಸತಿ ಪತಿಗಳು ಪರಸ್ಪರ ತೋರುವ ಪ್ರೇಮಕ್ಕಿಂತ, ಭಕ್ತನು ಪಶುಪತಿಯ ಮೇಲೆ ತೋರುವ ಪ್ರೇಮವೇ ಅತಿಶಯವೆಂಬುದನ್ನೂ ಅವರಿಗೆ ಜೀವನವೇ ಕಲಿಸಿದೆ. ಜಂಗಮರು ನಿತ್ಯವೂ ಅವರ ಅರಮನೆಗೆ ವಿಶೇಷವಾಗಿ ಆಗಮಿಸುತ್ತಿದ್ದರು. ಶಿವಭಕ್ತರೆಂದರೆ ಶಿವನಿಗಿಂತ ಮಿಗಿಲೆಂದು ಕಾಣುತ್ತಿದ್ದ ಇವರು ಮನಸಾರೆ ದಾಸೋಹದಿಂದ ಜಂಗಮರನ್ನು ತೃಪ್ತಿಪಡಿಸುತ್ತಿದ್ದರು. ಆಗಾಗ್ಯೆ ವಿದ್ವತ್‌ಗೋಷ್ಠಿಗಳನ್ನು ನಡೆಸುತ್ತಿದ್ದರು. ಧಾರ್ಮಿಕ ಮಹಾಸಭೆಗಳನ್ನು ವ್ಯವಸ್ಥೆಗೊಳಿಸುತ್ತಿದ್ದರು. ಭಾರತೀಯ ವೇದಾಂತಗಳ ದರ್ಶನಗಳನ್ನು ಕುರಿತು ವಿಚಾರಗೋಷ್ಠಿ ನಡೆಸುತ್ತಿದ್ದರು. ಸೌಂದರ್ಯದ ರಾಣಿಯೆಂದು ಬೀಗಿದ್ದ ಇವರ ಮಡದಿಗೇ ಇವರ ಜಂಗಮ ದಾಸೋಹ ಒಪ್ಪಿಗೆಯಾಗಲಿಲ್ಲ. ಒಮ್ಮೆ ಹಸಿದುಬಂದ ಜಂಗಮರು ನಿಜಗುಣಮಹಾರಾಜರಿಲ್ಲದಿದ್ದಾಗ ಈಕೆಯ ಉದಾಸೀನ ವರ್ತನೆಯಿಂದ ಹಾಗೆಯೇ ಹಿಂತಿರುಗಿದ್ದರು. ಅಲ್ಲದೆ ಗಂಡನಿಗೂ ಈಕೆ ಪ್ರೇಮದ್ರೋಹ ಬಗೆದಳು. ಈಗಾಗಿ ಸಂಸಾರವೂ ಇವರಿಗೆ ಬೇಡವಾಯಿತು ರಾಜ್ಯ, ಕೋಶ, ಮಡದಿ ಎಲ್ಲವನ್ನೂ ತ್ಯಜಿಸಿ ಇವರು ಶಂಭುಲಿಂಗನ ಬೆಟ್ಟದಲ್ಲಿ ತಪಸ್ಸು ಮಾಡಿದರು. ಶಿವಯೋಗ ಹಾಗೂ ಕಾವ್ಯಯೋಗಗಳ ದಿವ್ಯ ತಪಸ್ಸು ಇವರಿಗೆ ಪರಮಸಿದ್ಧಿಯನ್ನು ನೀಡಿತು. ಅವರು ಶಿವಯೋಗಿಯೂ, ಕಾವ್ಯಯೋಗಿಯೂ ಆದದ್ದು ಕನ್ನಡದ ಪುಣ್ಯ.

ನಿಜಗುಣರ ಮುಂದಿನ ಜೀವನವು ವಿರಕ್ತಮಾರ್ಗದಲ್ಲಿ ಸಾಗಿ ಮಹಾನದಿಯಾಗುತ್ತದೆ. ಈ ಮಹಾನದಿಯ ಮಹಾಪೂರದಿಂದ ಪ್ರಯೋಜನ ಪಡೆಯದ ಕನ್ನಡಿಗನಿಲ್ಲ. ಅನೇಕ ಧಾರ್ಮಿಕ ಗ್ರಂಥಗಳೂ, ವಿಶ್ವಕೋಶವೂ, ಕೀರ್ತನೆಗಳೂ, ವಚನಗಳೂ ಇವರ ಹೃದಯವೀಣೆಯಿಂದ ಮೂಡಿಬಂದವು. ತ್ಯಾಗ, ಯೋಗ, ವೈರಾಗ್ಯಗಳ ತ್ರಿವೇಣಿ ಸಂಗಮವಾಗಿದೆ ಇವರ ಜೀವನ. ಸನ್ಯಾಸವು ಇದ್ದಕ್ಕಿದ್ದಂತೆಯೇ ಬರುವುದಿಲ್ಲ. ಹೆಂಡತಿಯ ದೆಸೆಯಿಂದ ಇವರು ಅರಮನೆ ಭಂಡಾರ ತ್ಯಜಿಸಿದುದು ನಿಮಿತ್ತ ಮಾತ್ರವಾಯಿತು. ಎಷ್ಟುಮಂದಿ ಸಂಸಾರದಲ್ಲಿ ವಿರಸಪಡೆಯುವುದಿಲ್ಲ; ಎಲ್ಲರೂ ಸಂನ್ಯಾಸಿಗಳಾಗುವುದಿಲ್ಲ. ನಿಜಗುಣರಿಗೆ ಅವರ ಪೂರ್ವಜನ್ಮದ ಸಂಸ್ಕಾರವೂ, ಕನ್ನಡ ನಾಡಿನ ಪುಣ್ಯವಿಶೇಷವೂ ಅವರ ಸಂನ್ಯಾಸಕ್ಕೆ ಕಾರಣವಾಯಿತೆನ್ನಬಹುದು. ಬಹಿರ್ಮುಖಿಯಾಗಿದ್ದ ವ್ಯಕ್ತಿ ಅಂತರ್ಮುಖಿಯಾದನು. ಅರಸನಾದ ವ್ಯಕ್ತಿ ಮಹಾಯೋಗಿಯಾದನು. ಬದ್ಧಜೀವಿಯು ಈಗ ಬುದ್ಧಜೀವಿಯಾದನು. ಶಿವಾನುಭೂತಿಯ ಮಹಾಸಂಪತ್ತು ಪಡೆದು ಅದರ ಒಡೆಯನಾದನು. ಸಿದ್ಧಪುರುಷರ ಸನ್ನಿಧಿಯು ಪ್ರಾಣಾಯಾಮ ಕಾವ್ಯರಚನೆಗಳಿಗೆ ಆಶ್ರಯದ ದಾರಿತೋರಿತು.

ಹೆಂಡತಿಯನ್ನು ತೊರೆದಮಾತ್ರಕ್ಕೇ ಯಾರೂ ಯೋಗಿಯಾಗಲಾರರು. ಮಾನವ ಕೇವಲ ಪ್ರಾಣಿಯಲ್ಲ; ವಿಚಾರ ಶೀಲ ಜಿಜ್ಞಾಸು, ಅಂತರ್ಮುಖಿ ನೋಟವುಳ್ಳವನೂ ಆಗಿದ್ದಾನೆ. ಮಾನವನು ಕೇವಲ ಅನ್ನಮಯದಲ್ಲಿ ವಿಹರಿಸಿದಲ್ಲಿ ಈ ಪ್ರಾಪಂಚಿಕ ಸುಖದುಃಖಗಳಿಗೆ ಭಾಗಿಯಾಗುತ್ತಾನೆ. ಆದರೆ ವಿಜ್ಞಾನಮಯ, ಆನಂದಮಯ ಹಂತಗಳಲ್ಲಿ ಅಥವಾ ಶರಣ–ಐಕ್ಯ ಹಂತಗಳಲ್ಲಿ ಜೀವನ್ಮುಕ್ತನ ಸ್ಥಿತಿಯಲ್ಲಿ ಗುರುತರವಾದ ಸಿದ್ಧಿಯನ್ನು ಪಡೆದಾಗ ಆತನು ಲೋಕೋದ್ಧಾರದ ಕರ್ತನೂ ಲೋಕಕ್ಕೆ ಬೆಳಕೂ ಆಗುತ್ತಾನೆ.

ಯೋಗ ಎಂದರೆ ಸಂಸಾರವನ್ನು ತೊರೆಯುವುದು ಎಂದಲ್ಲ. ಯೋಗ ಎಂದರೆ ಪರಮಾತ್ಮನ ಸಂಬಂಧವನ್ನು ಪಡೆಯುವುದು ಎಂದರ್ಥ. ಲೌಕಿಕದಲ್ಲಿ ವ್ಯಕ್ತಿಯು ಕೇವಲ ಹಣಕಾಸು, ಸತಿ-ಸುತ, ಆಸ್ತಿ-ಪಾಸ್ತಿಗಳ ಸ್ವಾರ್ಥದ ಸಂಬಂಧ ಪಡೆದಿರುತ್ತಾನೆ. ಆದರೆ ಯೋಗದಲ್ಲಿ ಪರಮಾತ್ಮನ ಸಂಬಂಧವೊಂದನ್ನು ಮಾತ್ರ ಪಡೆದಿರುತ್ತಾನೆ. ಅಂತೆಯೇ ಆತ ಆನಂದಜೀವಿ, ಮುಕ್ತ ನಿಜಗುಣರು ಶಿವಯೋಗದ ಸಾಧನೆ, ಆಧ್ಯಾತ್ಮಿಕ ತತ್ತ್ವಜಿಜ್ಞಾಸೆ, ಕಾವ್ಯರಚನೆಗಳಲ್ಲಿ ಸತತವಾದ ಏಕಾಗ್ರತೆಯಿಂದ ಮುಂದುವರಿದರು. ಅನುಭಾವಿಗಳಲ್ಲಿ ಅಗ್ರಗಣ್ಯರಾದರು. ಸಂತರಲ್ಲಿ ಮಹಾಸಂತರಾದರು, ಪರಮಯೋಗೀಂದ್ರರಾದರು.

ಯೋಗಿಯ ಜೀವನದಲ್ಲಿಯೂ ಹಲವಾರು ತೊಡಕುಗಳುಂಟು. ಪರಧರ್ಮಿಯರೂ, ಅಸಹನೆಯುಳ್ಳವರೂ, ಮೂಢನಂಬಿಕೆಯುಳ್ಳವರೂ ಯೋಗಿಗಳಿಗೆ ಅನೇಕ ಅಡಚಣೆಗಳನ್ನುಂಡುಮಾಡುವುದುಂಟು. ಎಲ್ಲ ಯೋಗಿಗಳ ಜೀವನದಲ್ಲಿಯೂ ಈ ವಿಧವಾದ ಪ್ರಸಂಗಗಳುಂಟು. ಒಮ್ಮೆ ಕೆಲವರು ಕಾದ ಕಬ್ಬಿಣದ ರಸವನ್ನೇ ನಿಜಗುಣರ ಕೈಗೆ ಭಿಕ್ಷೆಯಾಗಿ ನೀಡಿದರು, ಆದರೆ ಅದು ಇವರ ತಪೋಬಲದಿಂದ ಬಿಲ್ವಪತ್ರೆಯಾಯಿತು. ಈ ಜನರು ತಮ್ಮ ಅವಿವೇಕವನ್ನು ತಾವೇ ಪರೀಕ್ಷಿಸಿಕೊಂಡಂತಾಯಿತು. ನಿಜಗುಣರ ಮಹಾವ್ಯಕ್ತಿತ್ವವನ್ನು ಕಂಡು ಅವರೆಲ್ಲರೂ ಮಣಿದರು.

ಮತ್ತೊಮ್ಮೆ ಇವರ ಶಿಷ್ಯರೊಂದಿಗೆ ಕಾಡಿನಲ್ಲಿ ಸಂಚರಿಸುತ್ತಿದ್ದಾಗ ಹುಲಿಯೊಂದು ಅಡ್ಡ ಬಂದಿತು. ಶಿಷ್ಯರೆಲ್ಲರೂ ಬೆದರಿ ತಮ್ಮ ಆಟ ಮುಗಿಯಿತೆಂದೇ ಭಾವಿಸಿದ್ದರು. ಆದರೆ ನಿಜಗುಣರು ತಮ್ಮ ಬೆತ್ತಮಾತ್ರದಿಂದಲೇ ಅದನ್ನು ನಿಯಂತ್ರಿಸಿದರು. ಅದು ಅವರ ಆಜ್ಞಾನುವರ್ತಿಯಾಗಿ ಆ ಕಾಡಿನ ದೂರವನ್ನು ಪ್ರಯಾಣಮಾಡುವವರೆವಿಗೂ ಅವರ ವಾಹನವಾಗಿ ತನ್ನ ಸೇವೆಯನ್ನು ಸಲ್ಲಿಸಿತು. ಶಿಷ್ಯರೆಲ್ಲರೂ ಆಶ್ಚರ್ಯಗೊಂಡರು.

ಶಂಭುಲಿಂಗನ ಬೆಟ್ಟದಲ್ಲಿ ಒಬ್ಬ ರಕ್ಕಸಿಯಿದ್ದಳು. ನಿಜಗುಣರ ತಪಸ್ಸಿಗೆ ಆಕೆ ವಿಘ್ನಕಾರಿಯಾಗಿದ್ದಳು. ಇವರು ತಮ್ಮ ಶಿವಾರ್ಚನೆಯಾಗುವವರೆಗೂ ತಮ್ಮ ಬೆತ್ತದ ತುದಿಯಲ್ಲಿರುವ ಗೆಜ್ಜೆಯಲ್ಲಿದ್ದು ಗೆಜ್ಜೆಯ ನಾದ ಮಾಡುತ್ತಿರಬೇಕೆಂದು, ಅನಂತರ ಆಕೆ ತಮ್ಮನ್ನು ಪೀಡಿಸಬಹುದೆಂದೂ ಇವರು ಆಕೆಗೆ ಕಟ್ಟಪ್ಪಣೆ ಮಾಡಿದರು. ಹನ್ನೆರಡುವರ್ಷ ಹೀಗೆಯೇ ಈಕೆ ಕಾದಳು. ಮತ್ತು ಗೆಜ್ಜೆಯನಾದ ಮಾಡಿದಳು, ಕೊನೆಗೆ ವಿಫಲಳಾದಳು. ಅವರ ಪೂಜಾ ಪ್ರಭಾವದಿಂದ ಈಕೆ ಪರಿವರ್ತಿತಳಾದಳು ನಿಜಗುಣರ ಕ್ಷಮೆ ಯಾಚಿಸಿದಳು. ಅಲ್ಲಿಯೇ ಅವರ ಸಾಧನಾಕ್ಷೇತ್ರದ ಗವಿಯ ಬಳಿಯಲ್ಲಿಯೇ ತಾನು ಇರಲು ಹಿಂದೆ ಹಿಂಸಾರೂಪಿಯಾಗಿದ್ದವಳು ಈಗ ಅಹಿಂಸಾರೂಪಿಯಾದಳು. ಈಕೆಗೂ ಪೂಜಾದಿಗಳು ಸಲ್ಲಲು ನಿಜಗುಣರು ವ್ಯವಸ್ಥೆ ಮಾಡಿದರು. ಇಂದಿಗೂ ಅಲ್ಲಿ ದುರ್ಗಿಯ ಮಂಟಪವೆಂದು ಪ್ರತಿ ವರ್ಷವೂ ಜಾತ್ರೆ ಉತ್ಸವಾದಿಗಳು ಅಲ್ಲಿ ನೆರವೇರುವುದುಂಟು.

ನಿಜಗುಣರ ಜೀವಿತದ ಬಗ್ಗೆ ಚಾರಿತ್ರಿಕ ಸಂಗತಿಗಳು ಇನ್ನೂ ಖಚಿತವಾಗಿ ತಿಳಿದುಬಂದಿಲ್ಲ. ಷಡಕ್ಷರ ದೇವನು (ಕ್ರಿ. ಶ 1650) ತನ್ನ ಕಾವ್ಯಗಳಲ್ಲಿ ಇವರನ್ನು ಸ್ಮರಿಸಿ ಗೌರವ ತೋರಿಸಿದ್ದಾನೆ. ಕೊಡಗಿನ ಲಿಂಗರಾಜರು 1775 ರಲ್ಲಿ ಇವರ ವಿವೇಕ ಚಿಂತಾಮಣಿಯನ್ನು ಸಂಸ್ಕೃತಕ್ಕೆ ಭಾಷಾಂತರಿಸಿದ್ದಾರೆ. ಇದೇ ಗ್ರಂಥವು ಶಾಂತಲಿಂಗದೇಶಿಕನಿಂದ ಮರಾಠಿಗೂ ಭಾಷಾಂತರಗೊಂಡಿರುವುದುಂಟು. ಸದ್ಯಕ್ಕೆ ನಿಜಗುಣರ ಕಾಲ ಸುಮಾರು 1500 ಕ್ರಿ.ಶ. ಆಗಿದೆಯೆನ್ನಬಹುದು.

ನಿಜಗುಣರು ಮಹಾಯೋಗಿಗಳೂ, ಮಹಾ ಕೋಲಾಹಲರೂ, ಸಾರಸ್ವತ ತಪಸ್ವಿಗಳೂ ಹೌದು. ಸಂಗೀತದಲ್ಲಿಯೂ ಇವರು ಹೆಚ್ಚಿನ ಪರಿಣತಿ ಪಡೆದಿದ್ದಾರೆ. ಸಂಗೀತ ಸಾಹಿತ್ಯಗಳೆರಡಕ್ಕೂ ಇವರ ಸೇವೆ ಸಂದಿದೆ. ಕೈವಲ್ಯ ಪದ್ಧತಿಯಲ್ಲಿ ವಿವಿಧ ರಾಗಗಳ ಕೀರ್ತನೆಗಳಿವೆ. ಸಂಗೀತವನ್ನು ಇವರು ಆತ್ಮವಿಶ್ವಾಸಕ್ಕೆ ಅಳವಡಿಸಿಕೊಂಡಿದ್ದಾರೆ. ಇವರು ಒಟ್ಟು ಏಳು ಗ್ರಂಥಗಳನ್ನು ರಚಿಸಿದ್ದಾರೆ. ಅರವತ್ತುಮೂವರ ತ್ರಿವಿಧಿ, ಪರಮಾರ್ಥ ಪ್ರಕಾಶಿಕೆ, ಕೈವಲ್ಯ ಪದ್ಧತಿ, ಅನುಭವ ಸಾರ, ಪರಮಾನುಭವ ಬೋಧೆ, ಪರಮಾರ್ಥ ಗೀತೆ, ವಿವೇಕ ಚಿಂತಾಮಣಿ.

ನಿಜಗುಣರು ಮಹಾವೇದಾಂತಿಗಳೂ ಆಗಿದ್ದಾರೆ. ಶಕ್ತಿವಿಶಿಷ್ಟಾದ್ವೈತವನ್ನು ಮಾತ್ರವಲ್ಲದೆ ದ್ವೈತ ಅದ್ವೈತಾದಿಗಳ ಸಿದ್ಧಾಂತಗಳೆಲ್ಲವನ್ನೂ ಇವರು ಬಲ್ಲವರಾಗಿದ್ದಾರೆ. ಶ್ರುತಿ. ಸ್ಮೃತಿಗಳನ್ನು ತಿಳಿದವರಾಗಿದ್ದಾರೆ. ಭಗವಾನ್ ಶಂಕರರ ಅದ್ವೈತ ವಿಚಾರ ವಿಮರ್ಶೆಯನ್ನು ತಮ್ಮ ವಿವೇಕ ಚಿಂತಾಮಣಿಯಲ್ಲಿ ವಿವರಿಸಿದ್ದಾರೆ. ಪರಮಾನುಭವ ಬೋಧೆಯು ಯಾಜ್ಞವಲ್ಕ್ಯರು ಮೈತ್ರೇಯಿಗೆ ಹೇಳಿದ ಅದ್ವೈತ ತತ್ವೋಪದೇಶವೆಂಬ ಸಂಸ್ಕೃತ ಗ್ರಂಥದ ಭಾವ ಪ್ರಕಾಶಿಕೆಯಾಗಿದೆ. ಪರಮಾರ್ಥಗೀತೆಯು ಯೋಗವಾಶಿಷ್ಠಗ್ರಂಥದ ಭಾವಪ್ರದೀಪವಾಗಿದೆ. ಆದ್ದರಿಂದ ಇವರನ್ನು ಕೇವಲ ಒಂದು ಮತದ ಸಿದ್ಧಾಂತದ ಬಂಧನಕ್ಕೆ ಗುರಿ ಮಾಡುವುದೂ ಸಾಧ್ಯವಿಲ್ಲ. ಇವರು ವೀರಶೈವರೆಂಬುದಂತೂ ಖಚಿತ. ಲಿಂಗಾಂಗ ಸಾಮರಸ್ಯದ ವಿಷಯಗಳು ಇವರಲ್ಲಿ ಪ್ರಧಾನ. ಆದರೂ ವೇದಾಂತಿಯೂ ಆಗಿದ್ದಾರೆಂಬುದನ್ನು ಗಮನಿಸಬೇಕು. ವಿಶ್ವ ಮಾನವತೆಯ ಉದ್ಧಾರ ಸೂತ್ರಗಳು ಅವರ ಅಮರ ವಾಣಿಯಲ್ಲಿವೆ.

—

## ಸಂಶೋಧಕರ ಗಮನಕ್ಕೆ

ಶ್ರೀ ಎಡೆಯೂರು ಶಿದ್ಧಲಿಂಗೇಶ್ವರ ಪುರಾಣದಲ್ಲಿ ಎಡೆಯೂರು ಸಿದ್ಧಲಿಂಗೇಶ್ವರರು ೨೦೦–೩೦೦ ಜನ ಹರ ಚರ ಗುರುಮೂರ್ತಿಗಳೊಡನೆ ಭಾರತ ಸಂಚಾರ ಮಾಡುತ್ತಾ ನಾಗಸಮುದ್ರ ಗ್ರಾಮದಿಂದ ಹೊಳಲಗುಂದಿಗೆ ಬಂದು ಅಲ್ಲಿ ಮಾಯಾದೇವಿ ಮತ್ತು ದೇವತೆಗಳಿಂದ ಪೂಜೆಗೊಂಡು, ಸನ್ಮಾನಿಸಲ್ಪಟ್ಟು ಮುಂದ ಕಗ್ಗರೆಗೆ ಹೋದಂತೆ ಕಥಾವಸ್ತು ಬರುತ್ತದೆ. ಬಳ್ಳಾರಿ ಜಿಲ್ಲಾ ಹೂವಿನ ಹಡಗಲಿ ತಾಲೂಕು ಕೇಂದ್ರಕ್ಕೆ ಆರುಮೈಲು ಪೂರ್ವದಲ್ಲಿ ಹೊಳಗುಂದಿ ಗ್ರಾಮ, ಸಿದ್ಧೇಶ್ವರ ಗುಡಿ. ಲಿಂಗ, ಗುಡ್ಡ ಇದೆ. ಪ್ರತಿವರ್ಷ ಬನದ ಹುಣ್ಣಿಮೆಯ ಹಿಂದು–ಮುಂದು ಶುಕ್ರವಾರದಿನ ತೇರು, ಮರುದಿನ ಅಗ್ನಿಕುಂಡ– ಪ್ರವೇಶ ಜಾತ್ರೆ ನಡೆಯುತ್ತದೆ. ಗುಡ್ಡದ ಕೆಳಗೆ ಹೆಣ್ಣು ದೇವತೆಯಾದ ಕಾಳಮ್ಮನ ಗುಡಿಯಿದೆ. ಶಂಕ್ರದಾಸಿಮಯ್ಯನ ಪುರಾಣ ಬರೆದ ಕರ್ತೃ ಮಲ್ಲಿಕಾರ್ಜುನ ಕವಿಯ ಕಲ್ಲೇಶ್ವರ ಗುಡಿಯೂ ಸಮೀಪವಿದೆ. ಆದರೂ ಮೊದಲು ಬಳ್ಳಾರಿಜಿಲ್ಲೆಯಲ್ಲಿದ್ದು ಈಗ ಕರ್ನೂಲುಜಿಲ್ಲೆಯಲ್ಲಿರುವ ಆಲೂರುತಾಲ್ಲೂಕಿನಲ್ಲೂ ಬಳ್ಳಾರಿಗೆ ಸಮೀಪದಹೆ ೂಳಲಗುಂದಿ ಎಂಬಗ್ರಾಮ, ಅಲ್ಲಿಯೂ ಶಿದ್ಧೇಶ್ವರ ಗುಡಿ ಲಿಂಗ, ಗುಡ್ಡ ಇವೆ. ಕಾರಣ ಹೀಗಾಗಿ, ಓದುಗರಿಗೆ ಅನುಮಾನ, ಶಂಕೆ ಬರುತ್ತದೆ. ಇವರಲ್ಲಿ ಎಡೆಯೂರು ಶಿದ್ಧಲಿಂಗೇಶ್ವರರು ಬಂದು ಪೂಜೆಗೈದುಕೊಂಡು ಹೋದ ಹೊಳಗುಂದಿ ಹೂವಿನ ಹಡಗಲಿ ತಾಲೂಕಿನಲ್ಲಿರುವುದೊ ? ಅಥವಾ ಕರ್ನೂಲುಜಿಲ್ಲಾ ಆಲೂರುತಾಲೂಕಿನಲ್ಲಿರುವುದೋ ? ಸಂಶೋಧಕರು, ತಿಳಿದವರು ಶೋಧಿಸಿ ತಿಳಿಸಬೇಕೆಂದು ಪ್ರಾರ್ಥನೆ–ಸೂಚನೆ.

—ಕೆ. ವಿರೂಪಾಕ್ಷಗೌಡ.

ಅಧ್ಯಕ್ಷ–ಬಳ್ಳಾರಿಜಿಲ್ಲಾ ಕ. ಸಾ. ಪ.

ಬಾಚಿಗೊಂಡನಹಳ್ಳಿ

ದಿನಾಂಕ :–13–2–1978.



# ಜೇನು ವಿಷ ಉತ್ತಮ ಔಷಧಿ

— ಡಿ. ಆರ್. ಬಳೂರಗಿ.

ಜೇನು ತುಪ್ಪವನ್ನು ಔಷಧಿಯಾಗಿ ಬಳಸುತ್ತಿರುವದು ಸಾಮಾನ್ಯವಾಗಿ ಹೆಚ್ಚು ಜನರಿಗೆ ಗೊತ್ತಿದೆ. ಸರ್ಪದ ವಿಷವನ್ನು ಸಂಗ್ರಹಿಸಿ ಅದನ್ನು ಅನೇಕ ರೋಗಗಳಿಗೆ ಔಷಧ ರೂಪದಲ್ಲಿ ಕೊಡುತ್ತಿರುವುದನ್ನು ಇತ್ತೀಚಿನ ದಿನಗಳಲ್ಲಿ ನಾವು ಕೇಳುತ್ತಿದ್ದೇವೆ. ಸರ್ಪ ಕಚ್ಚಿದಾಗ, ಪ್ರತಿಯಾಗಿ ಅದರ ವಿಷವನ್ನೇ ಔಷಧಿಯಾಗಿ ಕೊಡುತ್ತಾರೆ. ಈ ವಿಧಾನವನ್ನು ಪ್ರತಿ ವಿಷ ಚಿಕಿತ್ಸಾ ವಿಧಾನ (Antivenom theorapy) ವೆಂದು ಕರೆಯುತ್ತಾರೆ. ಪ್ರತಿ ವಿಷ ಚಿಕಿತ್ಸೆಯಲ್ಲಿ ಸರ್ಪದ ವಿಷದಷ್ಟೇ ಪರಿಣಾಮಕಾರಿಯಾಗಿ ಬಳಸುತ್ತಿರುವ ಇನ್ನೊಂದು ವಿಷವೆಂದರೆ ಜೇನ್ನೊಣದ ವಿಷ. ಇದು ಯಾವ ರೀತಿ ರೋಗಿಗಳ ಮೇಲೆ ವರ್ತಿಸುತ್ತದೆಂಬುದನ್ನು ಇಲ್ಲಿ ಮಾಡಿಕೊಡಲಾಗಿದೆ.



ಕ್ರಿ. ಶ. 1884 ರಲ್ಲಿ ಮೊಟ್ಟಮೊದಲಿಗೆ ರಷ್ಯದ ವಿಜ್ಞಾನಿ ಲ್ಯುಕೊಮಸ್ಕಿ ಎಂಬಾತನು ಜೇನಿನವಿಷಕ್ಕೆ ಕೆಲ ರೋಗಗಳನ್ನು ಗುಣಪಡಿಸುವ ಶಕ್ತಿಯಿರುತ್ತದೆಂಬ ಸಂಗತಿಯನ್ನು ಬಹಿರಂಗಪಡಿಸಿದನು. ಮತ್ತು ವೈದ್ಯರು ಈ ದೆಸೆಯಲ್ಲಿ ಸಂಶೋಧನೆಗೆ ತೊಡಗಬೇಕೆಂದು ಮನವಿ ಮಾಡಿಕೊಂಡಿದ್ದನು. ಆಗ ರಶಿಯದ ಸೈನ್ಯಖಾತೆಯಲ್ಲಿ ವೈದ್ಯನಾಗಿದ್ದ ಲೈಬಾರ್ಸ್ಕಿಯು ಸುಮಾರು ಎಪ್ಪತ್ತು ವರ್ಷಗಳಕಾಲ ಜೇನ್ನೊಣದ ವಿಷಯವನ್ನು ಅನೇಕ ರೋಗಿಗಳ ಮೇಲೆ ಪ್ರಯೋಗಿಸಿದನು. ಹಾಗೂ ಸಾಂಪ್ರದಾಯಕ ಮದ್ದುಗಳಿಂದ ವಾಸಿಯಾಗದ ಕೆಲವೊಂದು ರೋಗಗಳು ಈ ವಿಧಾನದಿಂದ ವಾಸಿಯಾಗುವುದನ್ನು ಕಂಡುಕೊಂಡನು.

### ಜೇನು ವಿಷದಲ್ಲಿ ಏನೇನು ?

ಜೇನು ವಿಷವು ಪಾರದರ್ಶಕ ದ್ರವವಾಗಿದ್ದು, ಕಹಿಯಾಗಿರುತ್ತದೆ. ಇದಕ್ಕೆ ಖಾರವಾದ ವಾಸನೆಯುಂಟು. ಇದರಲ್ಲಿ ಫಾರ್ಮಿಕ್, ಹೈಡ್ರೊಕ್ಲೋರಿಕ್ ಮತ್ತು ಆರ್ಥೋಫಾಸ್ಫರಿಕ್ ಆಮ್ಲಗಳಿರುತ್ತವೆ. ಗಂಧಕ, ಮೆಗ್ನೇಶಿಯಂ ಫಾಸ್ಫೇಟ್‌ಗಳೂ ಕೂಡ ಇದರಲ್ಲಿರುವುದು ಕಂಡುಬಂದಿದೆ. ರೋಗವನ್ನು ವಾಸಿ ಮಾಡುವಲ್ಲಿ ಮೆಗ್ನಿಶಿಯಂ ಫಾಸ್ಫೇಟು ಪ್ರಮುಖ ಪಾತ್ರವಹಿಸುತ್ತದೆ. ಅಲ್ಲದೆ ತಾಮ್ರ ಕಾಲ್ಸಿಯಂ ಮತ್ತು ತೈಲಾಂಶಗಳೂ ಕೂಡ ಕೆಲಮಟ್ಟಿಗೆ ಇದರಲ್ಲಿರುತ್ತವೆ. ಜೇನ್ನೊಣ ಕಚ್ಚಿದಾಗ ಉರಿತವುಂಟಾಗುವುದಕ್ಕೆ ಈ ತೈಲಾಂಶಗಳೇ ಕಾರಣವೆಂದು ಕೆಲ ಸಂಶೋಧಕರ ಮತ. ಇದು ಸಾಮಾನ್ಯ ಉಷ್ಣತೆಯಲ್ಲಿಯೇ ಒಣಗಿ ತೆಳುವಾದ ಗೋಂದಿನಂತೆ ಕಾಣುತ್ತದೆ. ಒಣಗಿದ ವಿಷವನ್ನು ಏಳೆಂಟು ದಿನಗಳ ಕಾಲ ಕಾಯಿಸಿದರೂ ಅದರ ಗುಣಧರ್ಮಗಳಲ್ಲಿ ಯಾವ ಬದಲಾವಣೆಯೂ ಆಗುವುದಿಲ್ಲ. ತಂಪಿನಲ್ಲಿಟ್ಟರೂ ಅಷ್ಟೆ, ಜೇನು ವಿಷ ಅತ್ಯಂತ ಪ್ರಬಲವಾದ ಪ್ರತಿಜೀವಕ (Antibiotic) ಗಳಲ್ಲೊಂದಾಗಿದೆ.

### ಜೇನು ವಿಷಕ್ಕೆ ಮನುಷ್ಯ ಸಂವೇದಿಯೇ ?

ಜೇನ್ನೊಣ ಕಚ್ಚಿದಾಗ ಒಂದು ಹನಿ ವಿಷವು ನಮ್ಮ ದೇಹವನ್ನು ಸೇರುತ್ತದೆ. ಇಷ್ಟು ಪ್ರಮಾಣದ ವಿಷಕ್ಕೆ ರೋಗವನ್ನು ವಾಸಿಮಾಡುವ ಸಾಮರ್ಥ್ಯವಿರುತ್ತದೆ. ಇದರ ಹತ್ತು ಪಟ್ಟು ವಿಷವು ಶರೀರವನ್ನು ಪ್ರವೇಶಿಸಿದರೆ ನಂಜಾಗುತ್ತದೆ. ನೂರುಪಟ್ಟು ಸೇರಿದಾಗ ಸಾವು ಸಂಭವಿಸುತ್ತದೆ. ಗಂಡಸರಿಗಿಂತ ಹೆಂಗಸರು ಮತ್ತು ಮಕ್ಕಳ ಮೇಲೆ ಇದು ಹೆಚ್ಚುಪರಿಣಾಮ ಬೀರಬಲ್ಲದು. ದೃಢಕಾಯನಾದ ವ್ಯಕ್ತಿಯು ಐದರಿಂದ ಹತ್ತು ಜೇನು ನೊಣಗಳು ಕಡಿದರೂ ಸಹಿಸಿಕೊಳ್ಳಬಲ್ಲನು. ಅನೇಕ ವರ್ಷಗಳವರೆಗೆ ಜೇನು ಸಾಕಣೆಯನ್ನೇ ಉದ್ಯೋಗ ಮಾಡಿಕೊಂಡು ಕೆಲವರಿಗೆ ಸಹಸ್ರಾರು ಜೇನ್ನೊಣಗಳು ಕಚ್ಚಿದಾಗ್ಯೂಕೂಡ ಯಾವ ಅಪಾಯವೂ ಆಗುವುದಿಲ್ಲ.

ರಶಿಯದ ಪೊಜೆದ್ನಿಕೊವ್ಹ ಎಂಬ ಜೇನು ಸಾಕುವವನ ಅನುಭವ ತುಂಬ ರೋಚಕವಾಗಿದೆ.

ಒಂದು ಸಲ ಸುಮಾರು ಮುನ್ನೂರು ಜೇನ್ನೊಣಗಳು ಅವನ ಒಂದು ವರ್ಷದ ಮಗವಿನ ಮೇಲೆ ದಾಳಿಯಿಟ್ಟವು. ಆಗ ಕೂಸಿನ ಮುಖವು ಊದಿಕೊಂಡಿತೆಂದರೆ, ಕೆಲವೇ ಗಂಟೆಗಳಲ್ಲಿ ಅದು ಸತ್ತುಹೋಗಬಹುದೆಂದು ತರ್ಕಿಸಲಾಯಿತು. ಆದರೆ ಆಶ್ಚರ್ಯಕರ ಸಂಗತಿಯೆಂದರೆ, ನಿಧಾನವಾಗಿ ಎರಡು ಮೂರು ದಿನಗಳಲ್ಲಿ ಮುಖದ ಬಾವು ಇಳಿಯಿತಲ್ಲದೆ, ಮಗು ಮೊದಲಿನ ಆರೋಗ್ಯವನ್ನು ಮರಳಿ ಪಡೆಯಿತು. ಆ ಮಗು ಗರ್ಭದಲ್ಲಿದ್ದಾಗ ತಾಯಿಗೆ ಜೇನ್ನೊಣ ಕಚ್ಚಿದ್ದ ಸಂಗತಿ ನಂತರ ಬೆಳಕಿಗೆ ಬಂದಿತು. ಈ ಕಾರಣದಿಂದ ಮಗು ಜೇನು ವಿಷಕ್ಕೆ ನಿರೋಧಕ ಶಕ್ತಿಯನ್ನು ಬೆಳೆಸಿಕೊಂಡಿದ್ದಿತು.

### ಔಶಷಧಿಯಾಗಿ ಜೇನು ವಿಷ:

ವಿಯೆನ್ನಾದ ವೈದ್ಯ ಟೆರ್ಸ್ಕ್ ಸಂಧಿವಾತದಿಂದ ಬಳಲುತ್ತಿದ್ದನು. ಅವನಿಗೆ ಜೇನ್ನೊಣವೊಂದು ಕಚ್ಚಿತು. ಅಚ್ಚರಿಯೆಂದರೆ ಅವನು ಕೆಲದಿನಗಳಲ್ಲಿಯೇ ಸಂಧಿವಾತದಿಂದ ಸಂಪೂರ್ಣವಾಗಿ ಮುಕ್ತನಾಗಿದ್ದ. ಈ ಘಟನೆಯಿಂದ ಉತ್ತೇಜಿತನಾದ ಟೆರ್ಸ್ಕ್ 1912 ರ ಸುಮಾರಿಗೆ ಸಂಧಿವಾತದಿಂದ ಬಳಲುವ ಆರುನೂರು ರೋಗಿಗಳ ಮೇಲೆ ಜೇನುವಿಷವನ್ನು ಪ್ರಯೋಗಿಸಿದನು. ಇವರಲ್ಲಿ ಐದುನೂರಾ ಇಪ್ಪತ್ತು ರೋಗಿಗಳು ಸಂಪೂರ್ಣವಾಗಿ ಗುಣಹೊಂದಿದರು. ಅರವತ್ನಾಲ್ಕು ರೋಗಿಗಳ ಸ್ಥಿತಿಯಲ್ಲಿ ಸ್ವಲ್ಪ ಮಟ್ಟಿಗೆ ಗುಣ ಕಂಡಿತು. ಹದಿನಾರು ರೋಗಿಗಳ ಸ್ಥಿತಿಯಲ್ಲಿ ಮಾತ್ರ ಯಾವ ಬದಲಾವಣೆಯೂ ಕಂಡು ಬರಲಿಲ್ಲ. ಈ ರೋಗವನ್ನು ಗುಣಪಡಿಸುವಲ್ಲಿ, ಜೇನು ವಿಷವು ಯಾವ ರೀತಿ ವರ್ತಿಸುತ್ತದೆಂಬುದರ ಬಗ್ಗೆ ವಿವರವಾಗಿ ಅಭ್ಯಸಿಸಲಾಗಿಲ್ಲ.

ಸಿಫಿಲಿಸ್, ಗನೋರಿಯಾ ಮುಂತಾದ ಭೀಕರ ಗುಹ್ಯ ರೋಗಗಳನ್ನೂ ಕೂಡ—ಅವು ಆರಂಭದ ಅವಸ್ಥೆಯಲ್ಲಿದ್ದರೆ,- ಜೇನು ವಿಷದಿಂದ ಗುಣಪಡಿಸಲು ಸಾಧ್ಯವಾಗಿದೆ. ಕೆಲವೊಂದು ಚರ್ಮರೋಗಗಳು ಹಾಗೂ ಕಣ್ಣಿಗೆ ಸಂಬಂಧಪಟ್ಟ ರೋಗಗಳನ್ನು ಗುಣಪಡಿಸುವಲ್ಲಿ ಜೇನು ವಿಷ ಯಶಸ್ವಿಯಾಗಿದೆ. ಈ ದೆಸೆಯಲ್ಲಿ ಇನ್ನೂ ಸಂಶೋಧನೆಗಳು ನಡೆಯಬೇಕು. ಹಾಗಿದ್ದಲ್ಲಿ ಜೇನು ವಿಷ ಒಂದು ಉತ್ತಮ ಪ್ರತಿಜೀವಕವೆನಿಸಿಕೊಂಡರೆ ಆಶ್ಚರ್ಯವೇನಲ್ಲ.

—

ಸತ್ಯದಲ್ಲಿ ನಡೆವುದು ಶೀಲ
ಸತ್ಯದಲ್ಲಿ ನುಡಿವುದು ಶೀಲ
ಸಜ್ಜನ ಸದಾಚಾರದಲ್ಲಿ ವರ್ತಿಸಿ
ನಿತ್ಯವನರಿವುದೇ ಶೀಲ ಕಾಣೆಭೋ
ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೆ.

—ತೋಂಟದ ಸಿದ್ಧಲಿಂಗಯತಿ.

ಹುಲಿಯ ಬಾಯಲ್ಲಿ ಸಿಲ್ಕಿದೆಳೆ ಹುಲ್ಲೆಮರಿಯಂತೆ
ಸರ್ಪನ ಬಾಯಲ್ಲಿ ಸಿಲ್ಕಿದ ಕಪ್ಪೆಯ ಮರಿಯಂತೆ
ಮಾರ್ಜಾಲನ ಬಾಯೊಳು ಸಿಲ್ಕಿದ ಮೂಷಕನಂತೆ
ಮಾಯೆ ತನ್ನ ಬಾಯೊಳಿಕ್ಕಿ ಎನ್ನ ತಿಂದು ತೇಗುತಿದೆ.
ಇದಕ್ಕಿನೆಂತೋ ಹರ ಹರಾ
ನಿನಗೆನ್ನನಾದ ಕಾರಣ ಎನಗೀ ದುರಿತ
ಪರಮಗುರು ಪಡಿವಿಡಿ ಸಿದ್ಧ ಮಲ್ಲಿನಾಥ ಪ್ರಭುವೆ.

—ಹೇಮಗಲ್ಲಪಂಪ.



# ನಾ ಕಂಡ ಡಿ. ವಿ. ಜಿ.

- ವಿ. ಎಸ್. ನಾರಾಯಣರಾವ್.

ಇಂದು ಕಣ್ಮರೆಯಾಗಿರುವ ಕನ್ನಡ ನಾಡಿನ ಮಹಾ ವ್ಯಕ್ತಿಗಳಲ್ಲಿ ಡಿ. ವಿ. ಜಿ. ಯವರು ಒಬ್ಬರು ಹುಟ್ಟು ಸಾಹಿತಿಗಳಾದ ಅವರ ಹೆಸರು ಪತ್ರಿಕಾರಂಗದಲ್ಲಿ ಚಿರಸ್ಮರಣೀಯ ಇಹಲೋಕದ ಯಾತ್ರೆ ಮುಗಿಸುವವರೆಗೂ ಅವರ ನಿಕಟವರ್ತಿಗಳಾದ ವಿ.ಎಸ್. ನಾರಾಯಣರಾವ್‌ರವರು ತಾವು ಕಂಡಂತೆ ಡಿ. ವಿ. ಜಿ. ಯವರನ್ನು ಇಲ್ಲಿ ಚಿತ್ರಿಸಿದ್ದಾರೆ. — ಸಂ.

ನಾನು ಡಿ. ವಿ. ಜಿ. ಅವರನ್ನು ಅನೇಕ ವರ್ಷಗಳಿಂದ ಬಲ್ಲೆ ಎನ್ನುವುದು ಉದ್ಧಟತನದ ಮಾತು ಆದೀತು. ಅವರು ಹಿರಿಯರು ನಾನು ಕಿರಿಯ ಮಾರ್ಗದರ್ಶನಕ್ಕಾಗಿ ಆಶೀರ್ವಾದ ಪಡೆಯುವುದಕ್ಕಾಗಿ ಆಗಾಗ ಅವರನ್ನು ಸಂದರ್ಶಿಸುತ್ತಿದ್ದೆ. ನಾನು ಅವರನ್ನು ನೋಡಲು ಹೋದಾಗಲೆಲ್ಲ, "ಸಣ್ಣ ಹುಡುಗನಾಗಿದ್ದಾಗಿನಿಂದ ನಿನ್ನನ್ನು ಬಲ್ಲೆ" ನಿನ್ನನು ಪತ್ರಿಕಾ ವೃತ್ತಿಗೆ ತೊಡಗಿಸಬೇಡವೆಂದು ನಿಮ್ಮಪ್ಪನಿಗೆ (ವಿದ್ಯಾ ಭೂಷಣ ವಿ. ಎಸ್. ಸಂಜೀವರಾವ್) ಹೇಳುತ್ತಲೇ ಇದ್ದೆ. ಆದರೂ ಈ ವೃತ್ತಿಗೆ ಇಳಿದಿಯಲ್ಲ ಎನ್ನುತ್ತಿದ್ದರು. ಆ ಕಾಲಕ್ಕೆ ಪತ್ರಿಕೋದ್ಯಮದಿಂದ ಉದರ ಪೋಷಣೆ ಮಾಡಿಕೊಳ್ಳುವುದೂ ಕಠಿಣವಾಗಿತ್ತು. ಡಿ. ವಿ. ಜಿ. ಅವರ ಸ್ವಾನುಭವ ನಮ್ಮ ತಂದೆಯವರು ಪಡುತ್ತಿದ್ದ ಶ್ರಮ ಇವೇ ಸಾಕ್ಷಿ. ಅಪರಾಧ ಅವರದಲ್ಲ, ನನ್ನದು ಎಂದು ನಾನು ಹೇಳುತ್ತಿದ್ದೆ. ನಿಮ್ಮ ದೊಡ್ಡಪ್ಪ ವಿ. ಎಸ್. ವಾಸುದೇವರಾಯರು, ಮಕ್ಕಳು ಏನು ಮಾಡುತ್ತಿದ್ದಾರೆ ಎಲ್ಲಿದ್ದಾರೆ ಎಂದು. ತದನಂತರ ನಮ್ಮ ಅಣ್ಣತಮ್ಮಂದಿರ ಯೋಗಕ್ಷೇಮ ವಿಚಾರಿಸುವರು ನಮ್ಮ ದೊಡ್ಡಪ್ಪ ವಾಸುದೇವರಾಯರೂ ಮಾನ್ಯ ಶ್ರೀ ವಿ. ಎಸ್. ಶ್ರೀನಿವಾಸಶಾಸ್ತ್ರಿಗಳೂ ಒಂದೇ ಊರಿನವರು ಒಂದೇ ಕಾಲೇಜಿನಲ್ಲಿ ಓದಿದವರು. ಒಮ್ಮೆ ಶಾಸ್ತ್ರಿಗಳು ಕಾಯಿಲೆಯಾಗಿ ಬೆಂಗಳೂರು ವಿಕ್ಟೋರಿಯ ಆಸ್ಪತ್ರೆಯ ಸಾಮಾನ್ಯ ವಾರ್ಡಿಗೆ ಸೇರಿ ಚಿಕಿತ್ಸೆ ಪಡೆಯುತ್ತಿದ್ದರು. ಡಿ. ವಿ. ಜಿ ನವರತ್ನರಾಮರಾವ್ ನಮ್ಮ ತಂದೆ ಮತ್ತು ಇತರರು ಅವರನ್ನು ಕಾಣಲು ದಿನವಹಿ ಆಸ್ಪತ್ರೆಗೆ ಹೋಗುತ್ತಿದ್ದರು. ವಾಸುದೇವರಾಯರೂ ಒಮ್ಮೆ ಅವರನ್ನು ಕಾಣುವುದಕ್ಕಾಗಿಯೇ ಮೈಸೂರಿನಿಂದ ಬಂದಿದ್ದರು. ಈ ಸಂದರ್ಭದಲ್ಲಿ ಶಾಸ್ತ್ರಿಗಳು ಡಿ ವಿ. ಜಿ ಅವರಿಗೆ ತಿಳಿಸಿದ ವಿಷಯವನ್ನು ಮೇಲಿಂದ ಮೇಲೆ ನನಗೆ ಹೇಳುತ್ತಲೇ ಇರುತ್ತಿದ್ದರು. "ಅಯ್ಯಾ, ಬೇಳೆಹುಳಿ (ಸಾಂಬಾರ್) ಉಂಡು ಲಕ್ಷಾಂತರ ರೂಪಾಯಿ ಆಸ್ತಿ ಕಳೆದುಕೊಂಡವರ ಕಥೆ ಕೇಳಿದ್ದೀಯ, ಆ ಕುಟುಂಬಕ್ಕೆ ಸೇರಿದವರೇ ವಾಸುದೇವರಾಯರು. ದಿನವಹಿ ಸಾಂಬಾರ್ ಭಕ್ಷ್ಯ ಭೋಜ್ಯಗಳ ಅಡುಗೆ, ಬ್ರಾಹ್ಮಣ ಸಂತರ್ಪಣೆ ಮಾಡಿಸಿ ಇದ್ದ ಆಸ್ತಿಯನ್ನೆಲ್ಲ ಪೋಲು ಮಾಡಿದರು. ಇವರ ಹಿರಿಯರು ಕುಂಭಕೋಣದಲ್ಲಿ ಬ್ರಾಹ್ಮಣರಿಗಾಗಿ ಕಟ್ಟಿಸಿಕೊಟ್ಟ ರಾಯರ ಅಗ್ರಹಾರ ಈಗಲೂ ಉಳಿದಿದೆ ಎಂದು ಸ್ಮರಿಸುವರು."

### ಬೆಂಗಳೂರು ಗಣಪತಿ ಗಲಭೆ

1924 ರಲ್ಲಿ ಬೆಂಗಳೂರಿನ ಗಣಪತಿ ಗಲಭೆ ನಡೆಯಿತು. ಸರ್ ಮಿರ್ಜಾ ಇಸ್ಮಾಯಿಲ್ ಮತ್ತು ಡಿ. ವಿ. ಜಿ ಇವರಿಬ್ಬರಲ್ಲೂ ರಾಜಕೀಯ ಸ್ನೇಹ ಬಾಂಧವ್ಯ, ರಾಜ್ಯಾಂಗ ಸಂಬಂಧಿಸಿದ ಸಂದಿಗ್ಧ ಸನ್ನಿವೇಷಗಳು ಒದಗಿದಾಗ ಮಿರ್ಜಾ ಡಿ. ವಿ ಜಿ ಅವರ ಮನೆಗೆ ಮೋಟಾರ್ ಕಳುಹಿಸಿ ಬರಮಾಡಿಕೊಳ್ಳುವರು. ಇವರಿಬ್ಬರಲ್ಲಿ ಇಷ್ಟೊಂದು ಮಧುರ ಬಾಂಧವ್ಯ ಬೆಳೆದಿದ್ದರೂ, ಗಣಪತಿ ಗಲಭೆಯಿಂದ ಮಿರ್ಜಾ ಮುಸ್ಲಿಂ

ಪಕ್ಷಪಾತಿ. ಮಹಮದ್ ಅಬ್ಬಾಸ್ ಖಾನರನ್ನು ಆರೋಪಣೆಗಳಿಂದ ರಕ್ಷಿಸಲು ದಿವಾನರು ಈ ರೀತಿಯಲ್ಲಿ ನಡೆದ್ದುಕೊಳ್ಳುತ್ತಿದ್ದಾರೆಂದು ಜನ ಆಡಿಕೊಳ್ಳುತ್ತಿದ್ದರು. ಡಿ. ವಿ. ಜಿ. ಅವರಿಗೂ ಸಂದೇಹ ಆವರಿಸಿಕೊಳ್ಳದೆ ಇರಲಿಲ್ಲ. ಸಂಪಿಗೆ ವೆಂಕಟಪತ್ತೈಯ್ಯನವರು ವಾಜಪೇಯಂ ವೆಂಕಟೇಶಯ್ಯ ವಿ. ಎಸ್. ಸಂಜೀವರಾವ್, ಜಮಖಂಡಿ ಭೀಮರಾವ್, ಎಚ್. ವಿ ಸುಬ್ರಮಣ್ಯ ರಾಮಲಾಲ್ ತಿವಾರಿ, ಸುಬ್ಬರಾವು ಶೆಟ್ಟಿ ಮೊದಲಾದ ಹಲವರು ಈ ವಿಷಯದಲ್ಲಿ ಬಹಳ ಆಸಕ್ತಿ ವಹಿಸಿದ್ದರು. ಕೆಂಪೇಗೌಡ ರಸ್ತೆಯಲ್ಲಿದ್ದ ವೆಂಕಟಪತ್ತೈಯ್ಯನವರ ಮನೆಯಲ್ಲಿ ಡಿ. ವಿ. ಜಿ. ವೆಂಕಟೇಶಯ್ಯ, ಜಿ. ಆರ್. ಸ್ವಾಮಿ ಮತ್ತು ವಿ. ಎಸ್. ನಾರಾಯಣರಾವ್ ಇವರು ಪ್ರತಿ ದಿನ ಸೇರುತಿದ್ದರು.

ಈ ಸಂದರ್ಭದಲ್ಲಿ ಮಹಾರಾಜರಿಗೆ ಬೆಂಗಳೂರು ನಾಗರೀಕರ ಪರ ವಿಜ್ಞಾಪನಾ ಪತ್ರಿಕೆ ಅರ್ಪಿಸಲು ತೀರ್ಮಾನಿಸಲಾಯಿತು. ಪತ್ರಿಕೆ ಸಿದ್ಧಪಡಿಸಲು ಡಿ. ವಿ ಜಿ ಅವರಿಗೇ ಒಪ್ಪಿಸಲಾಯಿತು. ಮುದ್ರಣದ ಕೆಲಸ ಇಡಿರ್ಯ ಪ್ರೆಸ್ಸಿಗೆ ವಹಿಸಿಕೊಟ್ಟರು. ಪ್ರೂಫ್ ಕರಡು ಪ್ರತಿ ಅನೇಕಸಾರಿ ತಿದ್ದುವುದು ನನ್ನ ವಾಡಿಕೆ. ಬೇಸರಿಕೆಯಿಲ್ಲದೆ ನೀನು ಮಾಡುವಿಯಾ, ಎಂದು ಎಚ್ಚರಿಕೆ ಕೊಟ್ಟರು. ಬಹಳಸಾರಿ ಬದಲಾಯಿಸಿದರು.

1930 ರಲ್ಲಿ ಮೈಸೂರು ಸಂಸ್ಥಾನದ ಪ್ರಥಮ ಯುವಜನ ಸಮ್ಮೇಳನ ಬೆಂಗಳೂರು ಮಜೆಸ್ಟಿಕ್ ಸಿನಿಮಾ ಕಟ್ಟಡದಲ್ಲಿ ನಡೆಯಿತು. ಈ ಸಮ್ಮೇಳನಕ್ಕೆ ತಿಟ್ಟವಾರನಹಳ್ಳಿ ವಿ ವೆಂಕಟಪ್ಪನವರನ್ನು ಅಧ್ಯಕ್ಷರಾಗಿ ಮಾಡುವಂತೆ ಡಿ. ವಿ. ಜಿ. ಸಲಹೆ ನೀಡಿದರು. ಅಂತೆಯೇ ಮಾಡಿದೆವು. ಅತ್ಯಂತ ಉತ್ಸಾಹದಿಂದ ಸಮ್ಮೇಳನ ನಡೆಯಿತು. ಡಾಕ್ಟರ್ ಹರಡೀಕರ್, ಕಮಲಾದೇವಿ ಚಟ್ಟೋಪಾಧ್ಯಾಯ ಮೊದಲಾದವರು ಭಾಷಣಮಾಡಕೂಡದೆಂದು ಪ್ರತಿಬಂಧಕ ವಿಧಿಸಲ್ಪಟ್ಟಿತು. ಸಮ್ಮೇಳನ ಇದರಿಂದ ಮತ್ತಷ್ಟು ಸ್ಫೂರ್ತಿಗೊಂಡಿತು.

## ಖಾದಿಧಾರಿ ಡಿ. ವಿ. ಜಿ.

ಡಿ. ವಿ. ಜಿ. ನ್ಯಾಯವಿಧಾಯಕ ಸಭೆಗೆ ನಾಮಕರಣಮಾಡಲ್ಪಟ್ಟ ಸದಸ್ಯರಾಗಿದರೂ ಸರ್ಕಾರವನ್ನು ನಿರ್ಭಯವಾಗಿ ಟೀಕಿಸುತ್ತಿದ್ದರು. ಕೆಲಕಾಲ ಇವರು ಖಾದೀ ಭಕ್ತರಾಗಿದ್ದರೆಂಬುದು ಅನೇಕರಿಗೆ ತಿಳಿಯದ ವಿಷಯ. ಡಿ. ವಿ ಜಿ. ಯವರು ರಾಜಕೀಯದಲ್ಲಿ ಲಿಬರಲ್ ಪಕ್ಷದ ಧೋರಣೆ ಅನುಸರಿಸುತ್ತಿದ್ದರು. ಮಹಾತ್ಮ ಗಾಂಧಿಯವರಲ್ಲಿ ಭಕ್ತಿ ಗೌರವದಿಂದಿದ್ದರೂ, ಶಾಸನ ಭಂಗ ಚಳುವಳಿ ಇವರು ಅನುಮೋದಿಸುತ್ತಿರಲ್ಲಿಲ್ಲ. ಇವರ ಮಿತ್ರರಾದ ವೆಂಕಟಕತ್ತೈಯ್ಯನವರು ಕಾರವಾರದ ಕರನಿರಾಕರಣೆ ಚಳವಳಿಗೆ ಪ್ರೋತ್ಸಾಹಕೊಡುತ್ತಿದ್ದರು. ಹಣ ಶೇಖರಿಸಿ ಕಳುಹಿಸಿಕೊಡುತ್ತಿದ್ದರು. ಕಡಗೆ ಈ ಕಾರಣಕ್ಕಾಗಿಯೇ ಬಂಧಿತರಾದರು. ವೆಂಕಟಾಪತ್ತೈಯ್ಯನವರಲ್ಲಿ ಡಿ. ವಿ. ಜಿ. ಯವರಿಗೆ ತುಂಬ ಗೌರವ. ಅವರ ಪ್ರೇರಣೆಯೇ ಕಾರಣವೆಂದು ಹೇಳಬಹುದು. ಇವರೂ ಖಾದಿ ಧರಿಸತೊಡಗಿದರು. ಒಂದು ದಿನ ಮೆರವಣಿಗೆಯಲ್ಲಿ ಬಿಳಿಯ ಖಾದಿ ಪಾಯಿಜಾಮ, ಷರಟು, ಕೈಯಲ್ಲಿ ತಕಲಿ ಹಿಡಿದು ಭಾಗವಹಿಸಿದ್ದ ಚಿತ್ರ ನನ್ನ ಕಣ್ಣಿನ ಮುಂದೆ ಈಗಲೂ ನಿಂತಿದ್ದಂತಿದೆ, ನಮಗೇ ಆಶ್ಚರ್ಯ ಮತ್ತು ಸಂತೋಷ. ಆದರೆ ಬಹುಕಾಲ ಅವರು ಖಾದಿ ಭಕ್ತರಾಗಿ ಉಳಿಯಲಿಲ್ಲ.

ವಿದ್ಯಾಭೂಷಣ ವಿ.ಎಸ್. ಸಂಜೀವರಾಯರು ಪತ್ರಿಕಾ ಪ್ರಪಂಚದಲ್ಲಿ ಪಟ್ಟ ಶ್ರಮ, ಸಲ್ಲಿಸಿದ ಸೇವೆ ಅಪಾರ. ರಾಷ್ಟ್ರೀಯವಾದಿ ಸರ್‌ಮಿರ್ಜಾ ಮತ್ತು ಸಂಜೀವರಾಯರು ಉಭಯತ್ರರಲ್ಲೂ ಒಳ್ಳೆಯ ಬಾಂಧವ್ಯವೇ ಇತ್ತು. ಆದರೆ ಬೆಂಗಳೂರು ಗಣಪತಿ ಗಲಭೆಯಲ್ಲಿ ಅವರು ವಹಿಸಿದ ಪಾತ್ರ ದಿವಾನರಿಗೆ ಅಪ್ರಿಯವಾಯಿತು. ಆದ್ದರಿಂದ ರಾಯರು ಜೈಲ ವಾಸವನ್ನು ಅನುಭವಿಸಬೇಕಾಯಿತು. ಮೈಸೂರಿನ ರಾಜಕೀಯದಲ್ಲಿ ಸಂಜೀವರಾಯರ ಪಾತ್ರವೇನು ಕಡಿಮೆಯಿರಲಿಲ್ಲ. ಇವೆಲ್ಲವನ್ನು ಡಿ. ವಿ. ಜಿ. ಚನ್ನಾಗಿ ಅರಿತಿದ್ದರು. ಆದ್ದರಿಂದ ಅವರಲ್ಲಿ ಪ್ರೀತಿ ಮತ್ತು ಗೌರವ. ಒಮ್ಮೆ ಡಿ.ವಿ ಜಿ.ಅವರನ್ನು ನೋಡಲು ಮನೆಗೆ ಹೋಗಿದ್ದಾಗ ಸಂಜೀವರಾಯರ ಭಾವಚಿತ್ರವನ್ನು ತಂದುಕೊಡು ಎಂದು ಕೇಳಿದರು. ಫೋಟೋ ನೋಡಿ ಸಂತೋಷಪಟ್ಟು ಇದು ನನ್ನಲ್ಲಿಯೇ ಇರಲಿ ಎಂದು ತೆಗೆದಿಟ್ಟುಕೊಂಡರು.



## ವಿಶ್ವೇಶ್ವರಯ್ಯನವರ ಜೀವನ ಚರಿತ್ರೆ

ಸರ್ ಎಂ.ವಿಶ್ವೇಶ್ವರಯ್ಯನವರ ಶತಮಾನೋತ್ಸವ ಬೆಂಗಳೂರು ಲಾಲ್‌ಬಾಗಿನ ಗಾಜಿನಮನೆಯಲ್ಲಿ ನಡೆದ ಸಂದರ್ಭದಲ್ಲಿ ಎಂ. ವಿ. ಎಂಬ ಅಂಕಿತದಲ್ಲೇ ಸನ್ಮಾನ ಸಂಚಿಕೆ ಪ್ರಕಟವಾಯಿತು. ಇದರಲ್ಲಿ ಡಿ. ವಿ. ಜಿ. ತಮ್ಮ ಮತ್ತು ಮೋಕ್ಷಗುಂಡಂ ಅವರ ಪರಿಚಯದ ಸ್ವಾರಸ್ಯವಾದ ಘಟನೆಗಳನ್ನು ಚಿತ್ರಿಸಿರುತ್ತಾರೆ. ವಿಶ್ವೇಶ್ವರಯ್ಯನವರ ಜೀವನ ಮತ್ತು ಕಾರ್ಯನಿರ್ವಹಣೆ ಎಂಬ ಪುಸ್ತಕವನ್ನು ಇಗ್ಲೀಷಿನಲ್ಲಿ ನಾನು ಬರೆದಿರುತ್ತೇನೆ. ಪ್ರಕಟವಾಗಿದೆ. ಪುಸ್ತಕದ ಒಂದು ಗ್ರತಿಯನ್ನು ಗುಂಡಪ್ಪನವರಿಗೆ ಕಳುಹಿಸಿಕೊಟ್ಟೆ. ಅವರಿಗೆ ಕಣ್ಣು ಸ್ಪಷ್ಟವಾಗಿ ಕಾಣಿಸುತ್ತಿರಲಿಲ್ಲ. ಕೆಲಭಾಗ ಅವರೇ ಓದಿಕೊಂಡರು. ಕೆಲವನ್ನು ಇತರರಿಂದ ಓದಿಸಿ ಕೇಳಿಕೊಂಡರು.

ಕೆಲವು ದಿನಗಳನಂತರ ಅವರಿಂದ ದೊಡ್ಡ ಕಾಗದ ಬಂತು. "ಸರ್ ಮೋಕ್ಷಗುಂಡಂ ವಿಶ್ವೇಶ್ವರಯ್ಯನವರಂಥ ಮಹಾ ವ್ಯಕ್ತಿಯ ಪೂರ್ಣ ಜೀವನ ಚರಿತ್ರೆ ಇದುವರೆಗೂ ಪ್ರಕಟವಾಗದೆ ಇರುವುದು ನಮ್ಮ ಕೃತಜ್ಞತೆ ಮತ್ತು ದೇಶ ಭಕ್ತಿಯ ಅಭಾವದ ನಿದರ್ಶನವೆಂದು ಹೇಳಬಹುದು. ಅವರ ಸಂಪೂರ್ಣ ಜೀವನ ಚರಿತ್ರೆಯ ಈ ಪುಸ್ತಕವನ್ನು ಪ್ರಕಟಿಸಿ ಈ ಕಲಂಕವನ್ನು ನೀನು ಹೋಗಲಾಡಿಸಿರುವೆ. ನಿನಗೆ ಆತ್ಮೀಯ ವಂದನೆ. ಸರ್ ಎಂ.ವಿ ಅವರದು ನಿಷ್ಕಳಂಕ ಜೀವನ. ಕೈಗೊಂಡ ಪ್ರತಿಯೊಂದು ಕೆಲಸವನ್ನು ಅದು ಎಷ್ಟೇ ಅಲ್ಪವಿರಲಿ, ಅಚ್ಚುಕಟ್ಟಾಗಿ ಚೊಕ್ಕವಾಗಿ ನಿರ್ವಹಿಸುತ್ತಿದ್ದರು ಎಂದು ನೀನು ಬರೆದಿರುವುದು ಅಕ್ಷರಶಃ ಸತ್ಯ. ಅವರ ಕಾರ್ಯ ವಿಧಾನ ವೀಕ್ಷಿಸುವ ಅವಕಾಶ ನನಗೆ ಹಲವು ಬಾರಿ ಲಭಿಸಿತ್ತು. ಇದನ್ನು ನೀನು ಬಲ್ಲೆ. ಆತ್ಮೀಯವಾಗಿ ಮನಃ ಪೂರ್ವಕ ಮಾಡಲಾಗದ ಕಾರ್ಯ ಎಂದಿಗೂ ಅವರು ಕೈಗೊಳ್ಳುತ್ತಿರಲಿಲ್ಲ. ಪ್ರತಿಯೊಂದು ಕೆಲಸವನ್ನು ಅವರು ಶ್ರದ್ಧಾ ಪೂರ್ವಕ ನಿರ್ವಹಿಸುತ್ತಿದ್ದರು.

"ಈ ಪುಸ್ತಕದ ಪ್ರಕಟನೆಯಲ್ಲಿ ನಿನಗೆ ನೆರವಾದವರೆಂದು ನನ್ನ ಹೆಸರನ್ನೂ ನೀನು ಸೇರಿಸಿರುವೆ. ನಿನಗೆ ಯಾವ ರೀತಿಯಲ್ಲಿ ನನ್ನಿಂದ ಸಹಾಯ ದೊರೆತಿದೆಯೋ ನಾನರಿಯೆ, ನಿನ್ನ ವಿಶ್ವಾಸ ತೋರಿಸಬೇಕು. ಇದು ನಿನ್ನ ಅಭಿಲಾಷೆ ಅಲ್ಲವೇ; ಒಳ್ಳೆಯ ಗುಣ."

"ತುಂಬ ಉಪಯುಕ್ತವೂ, ಸ್ವಾರಸ್ಯವೂ ಆದ ಬಹಳ ವಿಷಯಗಳನ್ನು ಶ್ರಮವಹಿಸಿ ನೀನು ಸಂಪಾದಿಸಿರುವೆ. ತರುಣ ಜನಾಂಗಕ್ಕೆ ಇದು ಸ್ಫೂರ್ತಿದಾಯಕವಾಗುವುದರಲ್ಲಿ ಸಂದೇಹವಿಲ್ಲ. ನೀನು ಕಳುಹಿಸಿರುವ ಪುಸ್ತಕಕ್ಕಾಗಿ ನನ್ನ ವಂದನೆಗಳನ್ನು ಸ್ವೀಕರಿಸುವುದು. ನಿನಗೆ ಸನ್ಮಂಗಳವಾಗಲಿ, ಸುಖಿಯಾಗಿ ಬಾಳು. ವಿಶ್ವಾಸಪೂರ್ವಕ."

ಡಿ. ವಿ. ಜಿ. ಎಷ್ಟು ಉದಾರ ಚರಿತರು ಎಂಬುದನ್ನು ಈ ಪತ್ರ ನಿದರ್ಶಿಸುತ್ತದೆ. ಅವರು ಹೇಳುತ್ತಿದ್ದ ಮಾತುಗಳನ್ನೂ ವಿಶ್ವೇಶ್ವರಯ್ಯನವರನ್ನು ಕುರಿತು ಬರೆಯುತ್ತಿದ್ದ ಲೇಖನಗಳನ್ನು ಸಂಗ್ರಹಿಸಿ ನನ್ನ ಪುಸ್ತಕದಲ್ಲಿ ಅವರ ಅನುಮತಿ ಪಡೆದು ಸೇರಿಸಿರುವೆ. ಇದಕ್ಕಾಗಿ ಅವರಿಗೆ ಕೃತಜ್ಞತೆ ಅರ್ಪಿಸಿದ್ದೆ.

ಡಿ.ವಿ.ಜಿ ತುಂಬಾ ಖಾಯಿಲೆಯಾಗಿದ್ದಾಗ ಮತ್ತು ಈ ಪತ್ರ ಬರುವ ಮೊದಲೇ ಅವರನ್ನು ನೋಡಲು ಹೋಗಿದ್ದೆ. ಅಂದು ಅವರ ಕಣ್ಣಿನ ಶಸ್ತ್ರಚಿಕಿತ್ಸೆ ನಡೆಸಿದ್ದ ಡಾಕ್ಟರ್ ಕೃಷ್ಣಮೂರ್ತಿ, ನಿವೃತ್ತ ಚೀಫ್ ಇಂಜಿನಿಯರ್ ನರಸಿಂಹ ಅಯ್ಯಂಗಾರ್ಯರೂ ಬಂದಿದ್ದರು. ಅವರ ಸಹೋದರ ನನ್ನ ಗೆಳೆಯ ಡಿ. ವಿ. ರಾಮರಾವ್ ನನ್ನನ್ನು ಒಳಕ್ಕೆಬಿಡಲು ಇಚ್ಛಿಸುತ್ತಿರಲಿಲ್ಲ. ಅವರಿಗೆ ಉದ್ವೇಗವಾದೀತು ಆರೋಗ್ಯ ಮತ್ತಷ್ಟು ಹದಗೆಟ್ಟೀತು, ಶಂಕೆ. ಆದರೆ ಡಾಕ್ಟರ್ ಕೃಷ್ಣಮೂರ್ತಿ ನನ್ನನ್ನು ಒಳಕ್ಕೆ ಕರೆದುಕೊಂಡು ಹೋದರು. ಹಾಸಿಗೆಯಿಂದ ಹೇಳಲೂ ಸಾಧ್ಯವಾಗದ ಡಿ. ವಿ. ಜಿ. ಮೆಲ್ಲನೆ ಎದ್ದು ಒರಗು ದಿಂಬಿಗೆ ಒರಗಿ ಕುಳಿತರು. ನರಸಿಂಹಯ್ಯಂಗಾರರ ಪರಿಚಯ ಮಾಡಿಕೊಟ್ಟರು. ಡಾಕ್ಟರ್ ಕೃಷ್ಣಮೂರ್ತಿ ಅವರ ಕಣ್ಣು ಮತ್ತು ದೇಹ ಸ್ಥಿತಿ ವಿಚಾರಿಸಿ ನಿರ್ಗಮಿಸಿದರು. ತರುವಾಯ ಡಿ. ವಿ. ಜಿ ನನ್ನನ್ನು ಸಮೀಪಕ್ಕೆ ಕರೆದು ತಮ್ಮ ಪಕ್ಕದಲ್ಲಿ ಹಾಸಿಗೆಯ ಮೇಲೆ ಕೂಡಿಸಿಕೊಂಡರು. ನನ್ನ ಶಿರ ನೇವರಿಸಿದರು. ಬೆನ್ನಿನ ಮೇಲೆ ಕೈ ಆಡಿಸಿದರು ನೀನು ವಿಶ್ವೇಶ್ವರಯ್ಯನವರನ್ನು ಕುರಿತು ಬರೆದ ಪುಸ್ತಕ ತುಂಬಾ ಚೆನ್ನಾಗಿದೆ. ಬಹಳ

ವಿಷಯ ಅಡಗಿಸಿರುವೆ. ಇಂಗ್ಲೀಷಿನಲ್ಲಿ ಇಷ್ಟು ಚೆನ್ನಾಗಿ ಬರೆಯುವೆ, ಇಷ್ಟು ಪಾಂಡಿತ್ಯ ಇದೆಯೆಂದು ನಾನು ತಿಳಿದಿರಲಿಲ್ಲ. ಭೇಷ್, ಭೇಷ್, ಸಂಜೀವರಾಯರ ಮಗನಾಗಿ ಹುಟ್ಟಿದ್ದು ಸಾರ್ಥಕ ವಾಯಿತೆಂದು ಹೊಗಳಿದರು. ಇಷ್ಟರಲ್ಲಿ ನಿಟ್ಟೂರು ಶ್ರೀನಿವಾಸರಾಯರು ಬಂದರು. ನಾರಾಯಣರಾಯರು ಬರೆದಿರುವ ಪುಸ್ತಕ ಎಲ್ಲರೂ ಓದಬೇಕು. ಗೋಖಲೆ ಸಾರ್ವಜನಿಕ ಪುಸ್ತಕ ಭಂಡಾರಕ್ಕೆ ಮೂರು ಪ್ರತಿ ಕೊಳ್ಳಿರಿ. ಎಲ್ಲರೂ ಓದಲಿ ಎಂದು ಪ್ರೋತ್ಸಾಹಿಸಿದರು.

ನಮ್ಮನ್ನು ಆಶೀರ್ವದಿಸಿ ಮಾರ್ಗದರ್ಶನ ನೀಡಬಲ್ಲ ಮಹಾನ್ ವ್ಯಕ್ತಿ ಇನ್ನಿಲ್ಲ. —

## ಮಹಾತ್ಮರ ನೆನಪುಗಳು-೨ ಪ್ರಕೃತಿ ಚಿಕಿತ್ಸೆ

ಬಾಪೂಜಿ ಪ್ರಕೃತಿ ಚಿಕಿತ್ಸೆಯಲ್ಲಿ ತುಂಬಾ ವಿಶ್ವಾಸ ವಿಟ್ಟಿದ್ದರು. ಸೇವಾ ಗ್ರಾಮದ ಆಶ್ರಮದಲ್ಲಿ ಬಹಳ ಸುಂದರವಾದ ಬೆಕ್ಕೊಂದಿತ್ತು. ಅದರ ಮೇಲೆ ಬಾಪೂಜಿಗೆ ತುಂಬಾ ಮಮತೆ. ಕಸ್ತೂರಿಬಾ ತಾವೇ ಸ್ವತಃ ಆ ಬೆಕ್ಕಿಗೆ ಹಾಲು ಹಾಕುತ್ತಿದ್ದರು. ಒಂದು ದಿನ ಬೆಕ್ಕು ಹಾಲು ಕುಡಿಯಲಿಲ್ಲ. ಬಾ ಗೆ ತುಂಬಾ ದುಃಖವಾಯಿತು. ಅವರು ಬೆಕ್ಕನ್ನು ಗಾಂಧೀಜಿಯವರ ಬಳಿಗೆ ಒಯ್ದರು.

ಗಾಂಧೀಜಿಯವರು ಆಗ ಪ್ರಕೃತಿ ಚಿಕಿತ್ಸೆಯ ಪ್ರಯೋಗಗಳನ್ನು ಮಾಡುತ್ತಿದ್ದರು. ಅವರ ಜೊತೆಗೆ ಅನೇಕ ವಿದ್ಯಾರ್ಥಿಗಳು ಕೂಡ ಇದ್ದರು ಗಾಂಧೀಜಿ ಬೆಕ್ಕಿನ ಹೊಟ್ಟೆ ಮುಟ್ಟಿ ನೋಡಿದರು. ಹೊಟ್ಟೆಯಲ್ಲಿ ಗಾಳಿ ತುಂಬ ಗಟ್ಟಿಯಾಗಿತ್ತು. ಮೈ ಬೆಚ್ಚಗಿತ್ತು ಮುನ್ನಾದಿನ ಆಶ್ರಮದ ಇಲಿಗಳನ್ನು ಹಿಡಿದು ತಿನ್ನಲು ಆ ಬೆಕ್ಕನ್ನು ಬಿಟ್ಟಿದುದರಿಂದ ವಿಪರೀತ ಇಲಿ ಹಿಡಿದು ತಿಂದು ಅದಕ್ಕೆ ಅಜೀರ್ಣವಾಗಿದೆಯೆಂದು ಬಾಪೂಜಿ ಊಹಿಸಿದರು. ಅಂದು ಅವರು ವಿದಾರ್ಥಿಗಳಿಗೆ " ಈ ಬೆಕ್ಕು ಏನೆಲ್ಲಾ ಮಾಡುತ್ತದೆಂದು ನೋಡಿ ಬರೆದಿಡುವುದೇ ನಿಮ್ಮ ಇಂದಿನ ಪಾಠ " ಎಂದರು.

ಅದರಂತೆ ವಿದ್ಯಾರ್ಥಿಗಳು ಸಂಜೆ ಬರೆದ ಪಾಠವನ್ನು ತಂದೊಪ್ಪಿಸಿದರು. ಅದರಲ್ಲಿ 'ಬೆಕ್ಕು' ದಿನ ವಿಡೀ ಆಹಾರ ತಿನ್ನದೇ ಉಪವಾಸ ಮಾಡಿತ್ತು. ಬಿಸಿಲಿಗೆ ಹೊಟ್ಟೆಯನ್ನುಚಾಚಿ ಸೂರ್ಯರಶ್ಮಿಯ ಶಾಖವನ್ನು ಸ್ವೀಕರಿಸಿತು. ಹುಲ್ಲನ್ನು ತಿಂದು, ಹೆಚ್ಚಾದ ಆಹಾರವನ್ನ ವಾಂತಿಮಾಡಿತು; ತುಂಬ ಔದಾಸೀನ್ಯದಿಂದಿದ್ದು ವಿಶ್ರಾಂತಿ ತೆಗೆದು ಕೊಂಡಿತ್ತು; ಎಂದು ಬರೆದಿದ್ದ ನಾಲ್ಕು ನಿಯಮಗಳನ್ನು ಬಾಪೂ ತುಂಬಾ ಮೆಚ್ಚಿಕೊಂಡರು. ಈ ಟಿಪ್ಪಣಿಗಳನ್ನು ತಮ್ಮ ಪಾಠಪುಸ್ತಕದಲ್ಲಿ ಬರೆದು ಕೊಂಡರು.

ಇನ್ನೊಮ್ಮೆ ಕಸ್ತೂರಿ ಬಾಗೆ ಕಠಿಣ ಖಾಯಿಲೆ ಬಂತು. ಗಾಂಧೀಜಿಯೇ ಪ್ರಕೃತಿ ಚಿಕಿತ್ಸೆಯಿಂದ ಅವರ ಆರೋಗ್ಯ ಸುಧಾರಿಕೆಯತ್ತ ಗಮನವಿತ್ತು, " ಇನ್ನು ಕೆಲವು ದಿನ ಬೇಳೆ ಮತ್ತು ಉಪ್ಪು ತಿನ್ನಬಾರದು " ಎಂದರು. ಆಗ ಬಾ ಪತಿಯನ್ನು ತಮಾಷೆ ಮಾಡುತ್ತಾ ನೀವಾದರೆ ಇವುಗಳನ್ನು ಬಿಡಲು ಒಪ್ಪುತ್ತಿದ್ದಿರೇನು ? ಎಂದು ಕೇಳಿದರು.

ಆಗ ಬಾಪು ತಟ್ಟನೆ, " ಸರಿ ! ಇನ್ನು ಎರಡು ವರ್ಷ ಕಾಲ ನಾನು ಉಪ್ಪು ಮತ್ತು ಬೇಳೆ ಮುಟ್ಟುವುದೇ ಇಲ್ಲ ಬಿಡು " ಎಂದರು. ಬಾಗೆ ತುಂಬಾ ವಿಷಾದವಾಯಿತು. "ಛೇ, ಅದಕ್ಕೇಕೆ ಹಾಗೆನ್ನುತ್ತೀರಿ, ನಾನು ನೀವು ಹೇಳಿದಷ್ಟು ದಿನ ಅವುಗಳನು ಬಿಡುತ್ತೇನೆ, ನೀವು ಅಷ್ಟು ಕಠೋರವಾಗಬಾರದು, " ಎಂದರು.

" ಬಿಟ್ಟೆ ಅಂದರೆ ಬಿಟ್ಟೆ, ನನ್ನ ಮಾತು ಬದಲಿಸಲು ಸಾಧ್ಯವಿಲ್ಲ " ಎಂದರು ಬಾಪೂ ಆಮೇಲೆ ಎರಡು ವರ್ಷಗಳತನಕ ಅವರು ಉಪ್ಪು ಬೇಳೆಗಳೆಡೆಗೆ ಕಣ್ಣೆತ್ತಿಯೂ ನೋಡಲಿಲ್ಲ.



# ಬೇವು ಬೆಲ್ಲ

—ಎಂ. ಟಿ. ವಾಸುದೇವರೆಡ್ಡಿ.

ವೆಂಕಟೇಶ್ ಒಬ್ಬ ಬಡವಿದ್ಯಾರ್ಥಿ. ಇವನ ಮನೆ ಜೀವನ ಸಾಗಿಸುವುದು ಬಹಳ ಕಸ್ಟವಾಗಿತ್ತು. ಇವರಿಗೂ ಎರಡು ಎಕರೆ ಹೊಲ ಇತ್ತು. ಆದರೂ ಸರಿಯಾದ ಮಳೆ ಇಲ್ಲದೆ, ಬೆಳೆಯು ಇಲ್ಲವಾಗಿತ್ತು. ಇವನು ಪಕ್ಕದ ಒಂದು ಊರಿನಲ್ಲಿ ಸಾಹುಕಾರರ ಒಂದು ಮನೆಯಲ್ಲಿ ಸೇರಿಕೊಂಡು ತನ್ನ ವಿದ್ಯಾಭ್ಯಾಸ ಮುಂದುವರಿಸುತ್ತಾ ಎಸ್. ಎಸ್. ಎಲ್. ಸಿ. ಪಾಸುಮಾಡಿಕೊಂಡ. ಹುಡುಗ ಬಹಳ ಬುದ್ಧಿವಂತನಾಗಿದ್ದ, ತನ್ನ ಮುಂದಿನ ಅಭ್ಯಾಸಕ್ಕಾಗಿ ಹಳ್ಳಿಯನ್ನು ಬಿಟ್ಟು, ಪೇಟೆಗೆ ಬರಬೇಕಾಯಿತು. ಇವನು ಪಟ್ಟಣಕ್ಕೆ ಬಂದು ಪಿ. ಯೂ. ಸಿ. ಗೆ ಸೇರಿಕೊಂಡ. ಬಡಮನೆತನದವನಾಗಿದ್ದರಿಂದ ಬೇರೆಹುಡುಗರ ಜೊತೆ ರೂಮುಮಾಡಿ ಸ್ವಂತ ಅಡಿಗೆ ಮಾಡಿಕೊಂಡು ತನ್ನ ಅಭ್ಯಾಸ ಮುಂದುವರಿಸಿದ. ಇವರ ಕ್ಲಾಸಿನಲ್ಲಿ ಇವನದೇ ಓದಿನಲ್ಲಿ ಮುಂದಾಗಿತ್ತು. ಇವನು ಗುಣ, ನಡತೆ ಎಲ್ಲಾದರಲ್ಲೂ ಒಳ್ಳೆಯವನಾಗಿದ್ದರಿಂದ, ಅನೇಕ ವಿದ್ಯಾರ್ಥಿಗಳು ಇವನ ಸ್ನೇಹತ್ವ ಬೆಳೆಸಿದ್ದರು. ಇವರ ಕ್ಲಾಸಿನಲ್ಲಿ ವಿದ್ಯಾರ್ಥಿಗಳೊಂದೇ ಅಲ್ಲ ವಿದ್ಯಾರ್ಥಿನಿಯರೂ ಸಹ ಇದ್ದರು. ಅಂದರೆ ಈ ಕಾಲೇಜಿನಲ್ಲಿ Co-education ಇತ್ತು. ಇವನ ಅಂದವಾದ ಬರವಣಿಗೆ ತಪ್ಪಿಲ್ಲದ ಲೇಖನ, ಇವನ ಸ್ನೇಹಿತ ಸ್ನೇಹಿತೆಯರನ್ನೂ ಆಕರ್ಷಿಸಿದ್ದವು. ಇವನ ಅನೇಕ ನೋಟ್ಸುಗಳನ್ನು ಸ್ನೇಹಿತರು ತೆಗೆದುಕೊಂಡು ಹೋಗಿ ಬರೆದು ಕೊಳ್ಳುತ್ತಿದ್ದರು. ಇವನ ಓದಿನಲ್ಲಿ ಒಂದೇ ಅಲ್ಲ, ಅನೇಕ ಆಟಗಳು, ಚಿತ್ರಕಲೆ ಇಂತಹ ಅನೇಕ ಚಟುವಟಿಕೆಗಳು ಇವನಲ್ಲಿ ಅಭಿವ್ಯಕ್ತಗೊಂಡಿದ್ದವು. ಪರೀಕ್ಷೆಯು ಸಮೀಪಿಸಿತು. ಪರೀಕ್ಷೆ ದೃಷ್ಟಿಯಿಂದ ತನ್ನ ಇತರೆ ಚಟುವಟಿಕೆಗಳಿಗೆ ಗಮನ ಕೊಡದೆ, ತನ್ನ ಮೊದಲನೇ ಗುರಿಯಾದ ವಿದ್ಯಾಭ್ಯಾಸದ ಕಡೆ ಹೆಚ್ಚು ಆಸಕ್ತಿ ವಹಿಸಿದ. ರಾತ್ರಿ ಸಮಯದಲ್ಲಿ ಹೆಚ್ಚು ನಿದ್ದೆ ಕಟ್ಟಿ ಓದುತ್ತಾ, ಓದುತ್ತಾ ಈ ಸಮಯಕ್ಕೆ ಸರಿಯಾಗಿ ದುರಾದೃಷ್ಟವಶಾತ್ ಟೈಫಾಯಿಡ್ ಶುರುಆಯಿತು ಖಾಯಿಲೆ ಹೆಚ್ಚಾದ ಕಾರಣ ತನ್ನ ವಿದ್ಯಾಭ್ಯಾಸಕ್ಕೆ ಪೂರ್ಣ ತೊಂದರೆಯಾಯಿತು. ಖಾಯಿಲೆ ಸಂಪೂರ್ಣಗೊಳ್ಳಲು ಒಂದು ತಿಂಗಳುಕಾಲ ಬೇಕಾಯಿತು. ಇಂತಹ ಒಂದು ಕಾರಣದಿಂದಾಗಿ ಇವನ ಪಿ. ಯೂ. ಸಿ. ರಿಜಲ್ಟ್ ಬಂದಿದ್ದು ಮೂರನೇ ದರ್ಜೆಯಲ್ಲಿ (Third Class). ಇವನ ರಿಜಲ್ಟ್ ನೋಡಿ ಅನೇಕ ಸ್ನೇಹಿತರು ವ್ಯಥೆಪಟ್ಟರು. ಇದೇ ಕಾಲೇಜಿನಲ್ಲಿಯೇ ಮತ್ತೆ ಬಿ.ಎಸ್ ಸಿ. ಪದವಿಯನ್ನು ಮುಂದುವರಿಸಬೇಕಾಯಿತು. [ ಇವನ ಊರಿನ ಸಾಹುಕಾರ ಅವರ ತಂದೆಗೆ ಹೇಳಿದ್ದ. ಏನೆಂದರೆ ನಮ್ಮ ಊರಿನಲ್ಲಿ ನಿನ್ನ ಮಗ ಚೆನ್ನಾಗಿ ಓದುತ್ತಾನೆ. ಆದ್ದರಿಂದ ಅವನು ಈ ವರ್ಷ Ist Class ನಲ್ಲಿ ಪಾಸಾದರೆ ಡಾಕ್ಟರ ಓದಿಗೆ ಕಳುಹಿಸಬೇಕು. ಹಣ ಸಹಾಯ ನಾನು ಮಾಡುತ್ತೇನೆ ಎಂದು. ಆದರೆ ಅದು ಈ ರೀತಿಯಾಗಲಿಲ್ಲ ] ಇವನು ಬಿ. ಎಸ್. ಸಿ. ಪದವಿ ತರಗತಿಯಲ್ಲಿ ಒಳ್ಳೆರೀತಿಯಲ್ಲಿ ವ್ಯಾಸಂಗಮಾಡಿ, ಮೂರು ವರ್ಷವೂ ಫಸ್ಟ್‌ಕ್ಲಾಸಿನಲ್ಲಿ ಪಾಸಾಗಿ, ಬಿ ಎಸ್. ಸಿ. ಪ್ರಥಮದರ್ಜೆಯ ಸರ್ಟಿಫಿಕೇಟನ್ನು ಪಡೆದನು. ಈ ಬಿ. ಎಸ್. ಸಿ. ವಿದ್ಯಾಭ್ಯಾಸದ ವೇಳೆಯಲ್ಲಿ ಅವನು ಕಂಡ ಕನಸು ಒಂದು ದಿನ ನನಸಾಯಿತು. ಏನೆಂದರೆ ಇವನ ಕ್ಲಾಸಿನಲ್ಲಿ ಸಂಜೀವಿನಿ ಎನ್ನುವ ಒಂದು ಹುಡುಗಿಯೂ ಇತ್ತು ಇವಳೂಸಹ ವೆಂಕಟೇಶನಷ್ಟೇ ವಿದ್ಯೆಯಲ್ಲಿ ಮುಂದಾಗಿದ್ದಳು. ವೆಂಕಟೇಶನಿಗೂ, ಇವಳಿಗೂ ವಿದ್ಯಾಭ್ಯಾಸದಲ್ಲಿ ಮಾತ್ರ ಯಾವಾಗಲೂ ಪೈಪೋಟಿ. ವೆಂಕಟೇಶ್ ಒಂದು ಪ್ರಶ್ನೆಗೆ ಉತ್ತರ ಕೊಟ್ಟರೆ, ಇವಳೂ ಸಹ ಒಂದು ಪ್ರಶ್ನೆಗೆ ಉತ್ತರ ಕೊಡಲೇ ಬೇಕು. ಇಲ್ಲವಾದರೆ ಇವಳ ಮನಸ್ಸಿಗೆ ನೆಮ್ಮದಿಯೇ ಇಲ್ಲ. ನಾವು ಸಾಮಾನ್ಯವಾಗಿ ಯಾರನ್ನಾದರೂ ಸ್ನೇಹಿತರನ್ನು ಕಂಡಾಗ ಮಾತಾಡುವ ಮೊದಲಿಗೆ ಏನ್ರೀ ಆರಾಮ್

ಊಟ ಆಯಿತೆ, ಏನು ಸಮಾಚಾರ ಎನ್ನುವುದಂಟು. ಹಾಗೆಯೇ ಕೆಲವು ಹುಡುಗರು ನೋಟ್ಸ್ ಬೇಕಿಲ್ಲವಾದರೂ ಸಂಜೀವಿನಿಯನ್ನು ಮಾತನಾಡಿಸುವುದಕ್ಕೋಸ್ಕರವಾಗಿ ಸ್ವಲ್ಪ ನೋಟ್ಸ್ ಕೊಡ್ರಿ ಎಂದು ಕೇಳುತ್ತಿದ್ದರು. ಇವರನ್ನು ನೋಡಿ ವೆಂಕಟೇಶನೂ ಸಹ ಇವಳನ್ನು ಮಾತಾಡಿಸಿ ಪರಿಚಯ ಮಾಡಿಕೊಳ್ಳಬೇಕು ಎನ್ನುವ ಆಸೆ ಇದ್ದರೂ ಸಹ ಯಾವತ್ತೂ ಮಾತಾಡಿಸಿರಲಿಲ್ಲ. ಆಕಸ್ಮಾತ್ತಾಗಿ ಇವಳ ಹತ್ತಿರ ನೋಟ್ಸ್ ಕೇಳಿದರೆ, ಇವಳು ನನ್ನ ದಡ್ಡತನಕ್ಕೆ ಬೆಲೆ ಕಟ್ಟುತ್ತಾಳೆ ಎನ್ನುವ ಕಲ್ಪನೆ ಇವನಲ್ಲಿತ್ತು. ಈ ರೀತಿಯಾಗಿ ಇವಳ ಪರಿಚಯವಾದರೆ ಒಳ್ಳೆಯದು ಎಂದು ವೆಂಕಟೇಶ್ ಕನಸು ಕಾಣುತ್ತಿದ್ದ. ಈ ಕನಸು ಒಂದು ದಿನ ನನಸಾಯಿತು.

ಹೇಗೆಂದರೆ ಆಗ ಇವನು ಕೊನೆ ವರ್ಷದ ಬಿ. ಎಸ್. ಸಿ. ವಿದ್ಯಾರ್ಥಿ. ಇವನ ಪರೀಕ್ಷೆ ಸಮಯಕ್ಕೆ ಸರಿಯಾಗಿ ಯುಗಾದಿ ಹಬ್ಬವಿತ್ತು, ಸೋಮವಾರ ಪರೀಕ್ಷೆ. ವೆಂಕಟೇಶ್ ಎಲ್ಲಾ ಪಾಠಗಳನ್ನೂ ಓದಿ ಸಾಯಂಕಾಲ ಐದುಗಂಟೆ ಸಮಯಕ್ಕೆ ತನ್ನ ತಂದೆಯನ್ನು ಊರಿಗೆ ಕಳುಹಿಸಿ ಸ್ವಲ್ಪ ವಿರಾಮ ತೆಗೆದುಕೊಳ್ಳಲು ವಾಕ್ ( Walk ) ಹೊರಟ. ಇವನು ಹೋಗುವ ದಾರಿಯಲ್ಲೇ ಸಂಜೀವಿನಿ ಮನೆ ಇತ್ತು. ಸಂಜೀವಿನಿ ಹಬ್ಬದ ಊಟ ಮುಗಿಸಿಕೊಂಡು ತಂಪಾದ ಗಾಳಿಗೆ ಮೈಯೊಡ್ಡಿ ತನ್ನ ಮನೆಯ ಕಾಂಪೌಂಡ್ ಮುಂದೆ ನಿಂತಿದ್ದಳು. ವೆಂಕಟೇಶ್ ಬರುವುದನ್ನು ನೋಡಿದಳು. ಇವಳೂ ಯಾವತ್ತೂ ಮಾತಾಡಿಸಿದವಳಲ್ಲ, ಹೇಗೆ ಮಾತನಾಡಿಸುವುದು ಎಂದು ಯೋಚನೆ ಮಾಡಿದಳು. ವೆಂಕಟೇಶ್ ದೂರದಲ್ಲಿರುವಾಗಲೇ ಇವಳ ಕಡೆ ನೋಡಿ, ಮನೆ ಮುಂದೆ ಬಂದ ತಕ್ಷಣ ಆ ಕಡೆ ನೋಡದೆ ತಲೆ ತಗ್ಗಿಸಿಕೊಂಡು ಹೋಗುತ್ತಿದ್ದ. ಸಂಜೀವಿನಿ ಧೈರ್ಯ ಮಾಡಿ ವೆಂಕಟೇಶ್ ಎಂದಳು. ಇವನಿಗೂ ಮೈಯಲ್ಲ ಬೆಚ್ಚಗಾಯಿತು, ಆದರೂ ಹೆಜ್ಜೆಯನ್ನು ನಿಲ್ಲಿಸಿ ಸ್ವಲ್ಪ ಹಿಂದಕ್ಕೆ ಬಂದ. ಏಕೆ ಹಬ್ಬಕ್ಕೆ ಊರಿಗೆ ಹೋಗಿಲ್ಲ ಎಂದು ಕೇಳಿದಳು. ಪರೀಕ್ಷೆ ಇರೋದು ಗೊತ್ತೇ ಇದೆ ಅಲ್ವಾ ಎಂದ ವೆಂಕಟೇಶ್. ಹೌದಲ್ಲ ಸರಿ. ಸರಿ ಮತ್ತೆ ಊಟಕ್ಕೆ ಬನ್ರಿ ಹೋಗೋಣ ಎಂದಳು. ಇಲ್ಲ ಪರ್ವಾಗಿಲ್ಲ ನಮ್ಮ ತಂದೆಯವರು ಊರಿಂದ ಬಂದಿದ್ದರು, ಊಟ ತೆಗೆದುಕೊಂಡು ಬಂದಿದ್ದರು ಎಂದ. ಅಷ್ಟೊತ್ತಿಗೆ ಇವಳ ತಾಯಿ ಬಂದು ಬಾರಪ್ಪ ಆಗೆಲ್ಲ ಅನ್ನಬಾರದು, ಎಂದು ಒಳಗೆ ಕರೆದುಕೊಂಡು ಹೋದರು. ಸಂಜೀವಿನಿಯೇ ಊಟ ಬಡಿಸಲು ಮುಂದಾದಳು. ವೆಂಕಟೇಶ್ ಮೊದಲು ಬೇವು ಬೆಲ್ಲ ಸ್ವೀಕರಿಸಿ ಊಟ ಮುಗಿಸಿದ. ಊಟ ಮುಗಿದ ನಂತರ ಹೊರಗಡೆ ಒಂದು ಹಾಲಿನಲ್ಲಿ ಮಾತಾಡುತ್ತಾ ಕುಳಿತರು. ಸಂಜೀವಿನಿ ತನ್ನ ತಾಯಿಯ ಮುಂದೆ ಇವನ ನಡತೆ, ಗುಣ, ಓದು, ಮನೆ ವಿಚಾರ ಎಲ್ಲಾ ತಿಳಿಸಿದಳು. ವೆಂಕಟೇಶನು ಬಹಳ ವೇಳೆಯಾದ ಕಾರಣ; ಅವರಿಗೆ ಸಾಯಿಂಕಾಲದ ನಮಸ್ಕಾರ ಹೇಳಿ ( good night ) ತನ್ನ ರೂಮಿಗೆ ಹೊರಟ. ( ಸಂಜೀವಿನಿಗೆ ಅವನ ಪೂರ್ತಿ ಮನೆಯ ವಿಷಯ ತಿಳಿಯಲು ಕಾರಣ; ಒಂದು ಸಲ ಬಿ. ಎಸ್. ಸಿ. Botanical ಟೂರ್‌ಲ್ಲಿ ಅವನ ಹುಟ್ಟಿದಾಗಿನಿಂದ ಈ ವರೆಗಿನ ನಡೆದ ಎಲ್ಲಾ ವಿಚಾರವನ್ನು ಎಲ್ಲಾ ಸ್ನೇಹಿತರಿಗೂ ತಿಳಿಸಿದ್ದ.) ಸಂಜೀವಿನಿಯೂ ಸಹ ಬಿ. ಎಸ್. ಸಿ. ಫಸ್ಟ್‌ಕ್ಲಾಸಿನಲ್ಲಿ ಪಾಸಾದಳು. ಇಬ್ಬರೂ ಮೈಸೂರಿನಲ್ಲಿ ಎಂ.ಎಸ್.ಸಿ. ಅಭ್ಯಾಸಕ್ಕೆ ಸೇರಿಕೊಂಡರು. ಸಂಜೀವಿನಿ Ladies Hostel ನಲ್ಲಿ ಸೇರಿದಳು. ವೆಂಕಟೇಶನೂ ಸಹ Gents Hostel ಗೆ ಸೇರಿಕೊಂಡನು. ವೆಂಕಟೇಶ್ ಸಂಜೀವಿನಿಯರ ಸ್ನೇಹ ಕಳೆದ ನಾಲ್ಕು ವರ್ಷವಲ್ಲದೆ, ಇನ್ನೂ ಎರಡು ವರ್ಷ ಸ್ನೇಹ ಹೆಚ್ಚಾಯಿತು. ಇಬ್ಬರೂ ಸಮ ವಯಸ್ಕರು, ಎರಡೂ ವರ್ಷವೂ ಬಹಳ ಸಂತೋಷವಾಗಿಯೇ ಕಾಲ ಕಳೆಯಿತು. ಇವರಿಬ್ಬರೂ ಆಗಿಂದಾಗ್ಗೆ ಭೇಟಿಯಾಗುತ್ತಿದ್ದರು. ಮನೆಯಕಡೆ ಎಲ್ಲಾ ವಿಚಾರಗಳನ್ನು ಇಬ್ಬರೂ ವಿಚಾರಿಸುತ್ತಿದ್ದರು. ಎಂ.ಎಸ್.ಸಿ. ರಿಜಲ್ಟ್ ಸಂಜೀವಿನಿ ಫಸ್ಟ್‌ಕ್ಲಾಸಿನಲ್ಲಿ ಮತ್ತು ವೆಂಕಟೇಶನ ರಿಜಲ್ಟ್ ಸೆಕೆಂಡ್ ಕ್ಲಾಸಿನಲ್ಲಿ ಆಯಿತು. ಇವನೂ ಫಸ್ಟ್‌ಕ್ಲಾಸಿನಲ್ಲಿ ಪಾಸಾಗ ಬಹುದಿತ್ತು, ಆದರೆ ಇವನಿಗೆ ಸಂಜೀವಿನಿಯ ಯೋಚನೆ ತಲೆಯಲ್ಲಿ ಗಸ್ತು ಹೊಡೆಯುತಿತ್ತು. ಇವರಿಬ್ಬರೂ ಸ್ವಲ್ಪ ಕಾಲದ ನಂತರ ಬೇರೆ ಬೇರೆ ಕಡೆ ಕೆಲಸಕ್ಕೆ ಸೇರಿಕೊಂಡರು. ಇವರ ಓದು ಮುಗಿಯಿತು, ಕೆಲಸಕ್ಕೂ ಸೇರಿದಾಯಿತು. ಈಗ ಇವರ ತಂದೆ ತಾಯಿಗಳಿಗೆ ಮದುವೆ ಮಾಡಲು ಯೋಚನೆಗೀಡಾಯಿತು. ಸಂಜೀವಿನಿ ತಂದೆ ದೊಡ್ಡ ಆಸ್ತಿವಂತ. ಈ ಸಮಯದಲ್ಲಿ ಆಗಲೇ ವರದಕ್ಷಿಣೆ ಪ್ರಭಾವ ಬೀರಿತ್ತು. ವೆಂಕಟೇಶನ ತಂದೆ ಮಗನನ್ನು ಬಾಕಿ ಮಾಡಿ ಓದಿಸಿದ್ದ. ಇವನ ತಂದೆ ವರದಕ್ಷಿಣೆಗೆ ಸ್ವಲ್ಪ ಜೋರಾಗಿಯೇ ಇದ್ದ. ವೆಂಕಟೇಶ್ ಮತ್ತು ಸಂಜೀವಿನಿ ಅನೇಕ ಬೆಟ್ಟಗಳಲ್ಲಿ ಮಾತಾಡುತ್ತಾ ಆನಂದ ಬಾಷ್ಪಗಳನ್ನು ಸೂಸುತ್ತ, ಉತ್ಸಾಹದಿಂದ ನಲಿದುದ್ದುಂಟು. ಆದರೆ ಮದುವೆಯಾಗಲು ನಾಚಿಕೊಂಡು ಇಬ್ಬರೂ ಹೇಳಿಕೊಳ್ಳದೆ ಸುಮ್ಮನೆ ಇದ್ದರು. ಇವರಿಬ್ಬರೂ ಅವರ ತಂದೆ ತಾಯಿಗಳ ಹತ್ತಿರ ಸಂಜೀವಿನಿ ವೆಂಕಟೇಶನನ್ನು ವೆಂಕಟೇಶ ಸಂಜೀವಿನಿಯನ್ನು ಮದುವೆಯಾಗಲು ಹೇಳಿಕೊಂಡಿದ್ದರು.

ವೆಂಕಟೇಶ್ ತನ್ನ ತಂದೆ ಮತ್ತು ಊರಿನ ಸಾಹುಕಾರನನ್ನು ಕರೆದುಕೊಂಡು ಸಂಜೀವಳ ಊರಿಗೆ ಮದುವೆ ವಿಚಾರ ಮಾತಾಡಲು ಬಂದರು. ವೆಂಕಟೇಶನ ತಂದೆ ತನ್ನ ಮಗನಿಗಾಗಿ ಕಷ್ಟ ಪಟ್ಟ ಎಲ್ಲಾ ವಿಚಾರವನ್ನು ಹೇಳಿ ಹನ್ನೆರಡು ಸಾವಿರ ರೂಪಾಯಿ ವರದಕ್ಷಿಣೆಯೊಂದಿಗೆ ಮದುವೆ ನಿಶ್ಚಯವಾಯಿತು. ಸಂಜೀವಿನಿಯ ತಂದೆಗೆ ಇವನಿಗೆ ಹೆಣ್ಣುಕೊಡಲು ಇಷ್ಟವಿದ್ದಿಲ್ಲ. ಆದರೆ ಸಂಜೀವಿನಿ ತಾನು ಮದುವೆಯಾದರೆ ಅವನನ್ನೇ ಮದುವೆಯಾಗಬೇಕೆಂದು ಹಟ ಹಿಡಿದ ಕಾರಣ ಮದುವೆಗೆ ಇವಳ ತಂದೆಯೂ ಸಹ ಒಪ್ಪಬೇಕಾಯಿತು. ಕೊನೆಗೆ ಜ್ಯೋತಿಷ್ಯದ ಪ್ರಕಾರ ಒಂದು ನಿರ್ಧಿಷ್ಟ ದಿನದಂದು ಮದುವೆ ಏರ್ಪಾಟಾಯಿತು. ಮದುವೆಯು ಬಹಳ ವಿಜೃಂಭಣೆಯಿಂದ ತಮ್ಮ ಸ್ನೇಹಿತರೊಡಗೂಡಿ, ಹಿರಿಯರ ಶುಭಾಆಶೀರ್ವಾದದೊಂದಿಗೆ ನೆರವೇರಿತು. ಇನ್ನು ಹೊಸ ಜೋಡಿಯು ಸಂಸಾರವೆಂಬ ಸಾಗರದಲ್ಲಿ ಈಜುವುದಕ್ಕೆ ಮುಂದಾಗ ಬೇಕಾಯಿತು.

" ನಗು ನಗುತ ಸಾಗುತಿದೆ ಹೊಸಜೋಡಿ
ಮುಂದಿನಾ ದಿನದ ದಾರಿ ನೋಡಿ."

ಎನ್ನುವ ಹಾಗೆ ಜೀವನ ಮುಂದುವರಿಯಿತು. ವೆಂಕಟೇಶ ಸ್ವಲ್ಪ ಮೇಲಧಿಕಾರಿಗಳನ್ನು ಹಿಡಿದು ರೆಕಮಂಡ್ ಮಾಡಿಸಿ ಇಬ್ಬರೂ ಒಂದೇ ನಗರದಲ್ಲಿಯೇ ಅಧ್ಯಾಪಕ ವೃತ್ತಿಗೆ ಸೇರಿಕೊಂಡರು. ಈ ನಗರದಲ್ಲಿಯೇ ಒಂದು ಮನೆ ಮಾಡಿದರು. ಸಂಜೀವಿನಿ ತನ್ನ ತಂದೆ ತಾಯಿಗೆ ಒಬ್ಬಳೇ ಮಗಳಾದ್ದರಿಂದ ಮುದ್ದಿನಿಂದ ಸಾಕಿದ್ದರು. ಸಂಜೀವಿನಿಗೆ ಅಡಿಗೆ ಮಾಡುವುದರಲ್ಲಿ ಅಷ್ಟೇನೂ ಅನುಭವವಿರಲಿಲ್ಲ. ವೆಂಕಟೇಶನು ತನ್ನ ಹಿಂದಿನ ವಿದ್ಯಾರ್ಥಿ ಜೀವನದಲ್ಲಿ ಅನುಭವವಿದ್ದುದರಿಂದ ಅವನೂ ಸಹ ಅಡಿಗೆ ಮಾಡಲು ಸಹಾಯಕನಾಗಿದ್ದ. ಈ ಸಂದರ್ಭದಲ್ಲಿ ಒಂದು ದಿನ ನಡೆದ ಘಟನೆ: ಸಂಸಾರವೆಂಬ ಸಮುದ್ರದ ದಡ ಸೇರಲು ನಡುವೆ ಅನೇಕ ಎಡರು ತೊಡರುಗಳುಂಟು. ಒಂದು ದಿನ ತನ್ನ ಹೆಂಡತಿಗೆ ವೆಂಕಟೇಶ್ ಚಪಾತಿ ಮಾಡಲು ಹೇಳಿದ. ಇವನೂ ಸಹ ಮೊದಲೇ ತೋರಿಸಿಕೊಟ್ಟಿದ್ದ. ಸಂಜೀವಿನಿ ಮಣೆಯಮೇಲೆ ಚಪಾತಿ ತಿಕ್ಕಲು ಕುಳಿತಳು ಹಿಟ್ಟು ಒಂದು ಸಲ ಕೈಗೆ ಅಂಟಿಕೊಳ್ಳುವುದು, ಒಂದು ಸಲ ಬಿಗಿಯಾಗಿ ಮಣೆಗೆ ಅಂಟಿಕೊಳ್ಳುವುದು, ಇದನ್ನು ನೋಡಿ ಇವಳಿಗೆ ತಲೆಯೇ ಕೆಟ್ಟಂತಾಯಿತು. ಕೊನೆಗೆ ಚಪಾತಿ ತಿಕ್ಕಲೇ ಸಾಧ್ಯವಾಗಲಿಲ್ಲ. ಗಂಡನಾದಂತಹ ಒಬ್ಬ ವ್ಯಕ್ತಿ ತನ್ನ ಹೆಂಡತಿಯ ನಡತೆಯ ಬಗ್ಗೆ ಜೀವನ ದಾರಿಯಲ್ಲಿ ತಿದ್ದಿ ಸರಿಪಡಿಸಿಕೊಂಡು ಹೋಗಬೇಕಾದದು ಅವನ ಕರ್ತವ್ಯ. ಅವನು ಇವಳು ಚಪಾತಿ ತಿಕ್ಕುವುದನ್ನು ನೋಡಿ ಸ್ವಲ್ಪ ಸಿಟ್ಟಾಗಿ ಹೆಣ್ಣಾಗಿ ಏತಕ್ಕಾದರೂ ಹುಟ್ಟಿದೆಯೊ, ಏನು ಪ್ರಯೋಜನವೇ ಇಲ್ಲ, ಹಾಗೆ, ಈಗೆ ಎಂದು ಮಾತಾಡಿದನು. ಇವಳಿಗೆ ತಲೆಗೆ ಸ್ವಲ್ಪ ಹೊಡೆದಂತಾಯಿತು ಇವಳಿಗೂ ಸಿಟ್ಟು ಹೆಚ್ಚಾಯಿತು. ನನಗೆ ಮಾಡೋಡಕೆ ಬರೋಲ್ಲ, ಬೇಕಾದರೆ ದುಡ್ಡು ಕೊಡ್ತೀನಿ ಅಡಿಗೆ ಮಾಡೋಕೆ ಒಬ್ಬ ಆಳನ್ನು ತಂದಿಟ್ಕೊ ಎಂದಳು. ಇವನಿಗೋ ಇನ್ನೂ ಸ್ವಲ್ಪ ಉರಿಯುವ ಗಾಯಕ್ಕೆ ಉಪ್ಪಾಕಿದಂತಾಯಿತು. ಹೇ ಸಂಜೀವಿನಿ ನೋಡು ರೈಲು ಆಳಿ ತಪ್ಪಿದರೆ ಅದರ ಮುಂದಿನ ಗತಿ ಏನಾಗುತ್ತೆ, ನಾನು ನಿನ್ನ ಒಳ್ಳೆ ಬುದ್ಧಿವಂತೆ ಅಂತ ಮದುವೆಯಾದೇ ನೀನು ಇಂತೋಳು ಅನ್ನೋದು ನನಗೆ ತಿಳಿದಿದ್ದಿಲ್ಲ. ಅದಕ್ಕೆ ಹಿರಿಯರು ಹೇಳ್ತಾರೆ, ಬಿಳಿಯ ಕಾಗೆಯಾದರೂ ನೋಡಬಹುದು, ಆದರೆ ಹೆಣ್ಣಿನ ಗುಣವನ್ನು ಯಾರು ಬಲ್ಲರೂ ಅಂತ. ನಾನು ಹೆಣ್ಣು ಎನ್ನುವ ಒಂದು ದೇಹವನ್ನು ತನ್ನ ತೃಪ್ತಿಗೋಸ್ಕರ ಮಾತ್ರವೇ ಅಲ್ಲ ಸ್ವೀಕರಿಸಿದ್ದು, ಹೆಣ್ಣು ಎನ್ನುವ ಎರಡಕ್ಷರದ ಗುಣವನ್ನೂ ಸಹ ನಾನು ಬಯಸಿದ್ದು. ಜೀವನದಲ್ಲಿ ಅನೇಕ ಕಷ್ಟ ಸುಖ ಬರುತ್ತಲೇ ಇರುತ್ತವೆ. ಆದರೆ ಇಷ್ಟಕ್ಕೇ ನೀನು ಕೋಪಗೊಂಡರೆ ಹೇಗೆ, ನೀನು ನಮ್ಮ ವಿದ್ಯಾರ್ಥಿ ಜೀವನದಲ್ಲಿ ಯುಗಾದಿ ಹಬ್ಬದ ದಿನದಂದು ಊಟದ ಮೊದಲಿಗೆ ಬೇವು ಬೆಲ್ಲ ಕೊಟ್ಟಿದ್ದ

ಅರ್ಥವಾದರೂ ಏನು ! ನಾವು ಬೇವು ಬೆಲ್ಲ ಸವಿಯು ವುದು ಏಕೆಂದರೆ, ಇದರಲ್ಲಿ ಸಿಹಿ ಕಹಿ ಹೇಗೆ ಕೂಡಿ ಕೊಂಡಿವೆಯೋ ಹಾಗೆಯೇ ನಮ್ಮ ಜೀವನದಲ್ಲಿಯೂ ಕಷ್ಟ, ಸುಖ ಎರಡು ಬೇಕು, ಇವೆರಡೂ ಇದ್ದೇ ಇರು ತ್ತವೆ, ಇರಲೇಬೇಕು, ಆದ್ದರಿಂದ ಇಲ್ಲೊಂದು ಮಾತು ಹೇಳುತ್ತೇನೆ.

" ವರ್ಷಕ್ಕೊಮ್ಮೆ ಬೇವು ಬೆಲ್ಲ ಸವಿಯುವೆವು
ದಿನಕ್ಕೆ ಒಮ್ಮೆ ಸುಖ ದುಃಖಗಳ ನಾವು ಕಾಣುವೆವು
ಸುಖ ಬಂದಾಗ ಹಿಗ್ಗುವೆವು. ದುಃಖ ಬಂದಾಗ ಕುಗ್ಗುವೆವು
ಹಿಗ್ಗದೆ, ಕುಗ್ಗದೆ ಸಮನಾದ ಬಾಳು ನಡೆಸೆಂದ
ವಾಸುದೇವ

ಎನ್ನುವ ಹಾಗೆ ನಮ್ಮ ಜೀವನ ನಡೆಸಬೇಕು ಎಂದು ವೆಂಕಟೇಶ್ ತನ್ನ ಹೆಂಡತಿಗೆ ಹೇಳಿದನು. ಸಂಜೀವಿನಿ ತಲೆ ತಗ್ಗಿಸಿ ಮುಖ ಕೆಂಪಗೆ ಮಾಡಿ ಕೊಂಡು ಕಣ್ಣೀರಿಡುತ್ತಾ ಕುಳಿತಿದ್ದಳು. ತನ್ನ ಗಂಡನ ಒಂದೊಂದು ಮಾತು ಶ್ರೀ ರಾಮಚಂದ್ರನ ಬಾಣದಂತೆ ಸಂಜೀವಿನಿ ಮನಸ್ಸಿಗೆ ನೆಟ್ಟವು, ತನ್ನ ಗಂಡನ ಭಾವ ವನ್ನರಿತ ಸಂಜೀವಿನಿ ಸೆರಗಿನಿಂದ ಕಣ್ಣೀರು ಒರೆಸಿ ಕೊಂಡು, ತನ್ನ ಗಂಡನ ಪಾದಹಿಡಿದು ನಾನು ಇನ್ನೆಂದಿಗೂ ಎದುರು ಮಾತಾಡುವುದಿಲ್ಲ, ತಪ್ಪಾಯಿತು ಎಂದಳು. ಹಾಗೆಯೇ ಒಬ್ಬರಿಗೊಬ್ಬರ ಮುಖ ಅರಳಿಕೊಂಡವು. ತಾನು ಯಾವುದೋ ಅರೆನಿದ್ದೆಯಲ್ಲಿ ಮಾತಾಡಿದಂತಹ ಮಾತನ್ನು ಮನ್ನಿಸಿ, ನಿಮ್ಮಂತಹ ಪತಿಸೇವೆ ನನಗೆ ಸದಾ ಇರಲಿ ಎಂದು ಹೇಳಿದಳು. ಕೊನೆಯದಾಗಿ " ಗಂಡ ಹೆಂಡಿರ ಜಗಳ ಉಂಡು ಮಲಗುವತನಕ" ಎನ್ನುವ ಹಾಗೆ, ಆ ದಿನ ನಡೆದ ಎಲ್ಲಾ ಘಟನೆಯನ್ನು ಮರೆತು ಆ ರಾತ್ರಿ ಮತ್ತೆ ಹೊಸ ಚೇತನ ಪಡೆದರು. ಈ ರೀತಿಯಾಗಿ ವೆಂಕಟೇಶನು ತನ್ನ ಹೆಂಡತಿಗೆ ಎಲ್ಲಾದರಲ್ಲೂ ಸಹಾಯಮಾಡಿ, ತನ್ನ ಇನ್ನೂ ಉಳಿದಿರುವ ಮುಂದಿನ ಜೀವನವನ್ನು ಸಾಗಿಸಲು ಮುಂದಾದನು.

—

ಜ್ಞಾನಿಯ ಸಂಗ ನನೆಯ ಶಿಶುವಿನಂತಿರಬೇಕು.
ಜ್ಞಾನಿಯ ಸಂಗ ಭಾನುವಿನ ಕಾವಿನಂತಿರಬೇಕು.
ಜ್ಞಾನಿಯ ಸಂಗ ಸೌಖ್ಯದ ಕಾವಿನಂತಿರಬೇಕು.

—ಮೋಳಿಗೆಯ ಮಾರಯ್ಯ.

ಹಸಿವೆಂಬ ಹೆಬ್ಬಾವು ಬಸಿರ ಬಂದು ಹಿಡಿದಡೆ
ವಿಷವೇರಿತ್ತಯ್ಯ ಆಪಾದ ಮಸ್ತಕಕ್ಕೆ
ಹಸಿವಿಗನ್ನವನಿಕ್ಕಿ ವಿಷವ ನಿಳುಹ ಬಲ್ಲಡೆ
ವಸುಧೆಯೊಳಗಾತನೇ ಗಾರುಡಿಗ ರಾಮನಾಥ.

—ದೇವರ ದಾಸಿಮಯ್ಯ.



# ಕಾವ್ಯ ವಾಹಿನಿ



## ಯುಗಾದಿಯ ಸಂದೇಶ

—ವಸಂತ ಕುಷ್ಟಿಗಿ

ಯಾರ ಆಟವೋ, ಏನೋ
ಯಾರಿಗೂ ಚಿನ್ನಾಟ
ಹುಟ್ಟಿ ಸಾಯುವುದೊಂದೇ ನಮಗಿರುವ ಪಾಠ !
ನಮ್ಮನ್ನು ಹುಟ್ಟಿಸಿದ ಬ್ರಹ್ಮನಿಗದೋ,
ನೂರು ವರ್ಷದಲಿ ಪೂರ್ವಾರ್ಧವು ಗತಿಸಿ
ಉತ್ತರಾರ್ಧದ ಮೊದಲ ತಿಂಗಳಿನ
ಶ್ವೇತ ವರಾಹಕಲ್ಪದ,
ಹಗಲ ಗಳಿಗೆ ಹದಿಮೂರು ಪಳ ನಲವತ್ತೆರಡು ಕಳೆದಿರಲು
ಅವನ ದಿನದ ಲೆಕ್ಕ ವಿಪರೀತ !
ಕೃತ ತ್ರೇತ ದ್ವಾಪರ ಕಲಿಗಳು
ಒಂದಾದ ಮೇಲೊಂದು ಬರುತಿರಲು
ಒಂದೊಂದು ಮಹಾಯುಗವು !
ಇಂಥ ಎಪ್ಪತ್ತೊಂದು ಸಂದಿರಲು ಮನ್ವಂತರವು
ಹದಿನಾಲ್ಕು ಮನ್ವಂತರಕೆ ಕಲ್ಪತಾನೊಂದು
ಇದು ತಾನೆ ಬ್ರಹ್ಮನ ಒಂದುದಿನದ ಲೆಕ್ಕ !
ಇಂಥ ದಿನವೊಂದಕ್ಕೆ ಏಳು ಮನುಗಳಂತೆ
ಸಧ್ಯದಲಿ ಏಳನೆಯವ, ವೈವಸ್ವತನ ಸಂತೆ ! ಈ ತನಕ
ಕಲಿಯುಗದ ೫೦೭೯ ವರ್ಷಗಳದೂ ಅನಾಯಾಸ ಉರುಳಿ
ನಾಲ್ಕು ಲಕ್ಷ ಇಪತ್ತಾರು ಸಾವಿರ ಒಂಬತ್ತನೂರ ಇಪ್ಪತ್ತೈದು ಉಳಿದಿರಲು
ಕಳೆದವೆಷ್ಟೋ ಯುಗಗಳು ಕಳೆದವೆಷ್ಟೋ ಜನ್ಮ ಜನ್ಮಗಳು
ಆ ಅಂಚಿನಲೆ ಕಲಿಯ ಅವತಾರ
ಮತ್ತೆ ಪುಣ್ಯದ ಲೆಕ್ಕಕೆ ಸಂಚಕಾರ
ಆ ಆರಂಬದ ವರೆಗೆ ಈ ಜೀವ,
ಕೃತಯುಗದಲಿ ಒಂದು ಲಕ್ಷ ವರ್ಷ, ಹುಟ್ಟಿದಾಗೊಮ್ಮೆ ಬದುಕಿ
ಇಪ್ಪತ್ತಕ್ಕೆ ಇಪ್ಪತ್ತರಷ್ಟು ಪುಣ್ಯಸಂಗ್ರಹಿಸಿ,
ತ್ರೇತೆಯಲಿ ಒಂದೇ ಒಂದು ಹತ್ತು ಸಾವಿರ ವರ್ಷ,
ಹುಟ್ಟಿದಾಗೊಮ್ಮೆ ಬದುಕಿ
ಇಪ್ಪತ್ತಕ್ಕೆ ಹದಿನೈದರಷ್ಟು ಪುಣ್ಯ ಸಂಗ್ರಹಿಸಿ,
ದ್ವಾಪರದಲಿ ಒಂದೇ ಒಂದು ಸಾವಿರ ವರ್ಷ,
ಹುಟ್ಟಿದಾಗೊಮ್ಮೆ ಬದುಕಿ
ಇಪ್ಪತ್ತಕ್ಕೆ ಹತ್ತರಷ್ಟು ಪುಣ್ಯ ಸಂಗ್ರಹಸಿ,
ಅಷ್ಟೇ ಪಾಪವನು ಬೆಳೆಸಿ,
ಕಲಿಯುಗದಲಿ ಒಂದೇ ಒಂದು ನೂರು ವರ್ಷ,
ಹುಟ್ಟಿದಾಗೊಮ್ಮೆ ಬದುಕಿ
ಇಪ್ಪತ್ತರ ಪುಣ್ಯದ ಬಾರಾಮೀಟರ್ ಐದಕ್ಕೆ ಬಂದು,
ಪಾಪದ ಡಿಗ್ರಿ ಹದಿನೈದಕ್ಕೆ ಏರಿರಲು,
ಕಾಲಯು (ತ್ತದ) ಕ್ತಿಯವರೆಗೆ ನಾವಿಂದು ಬಂದಿದ್ದೇವೆ.
ಅಂಗುಷ್ಟಮಾತ್ರ ಉದ್ದಳತೆಯವರಾಗುತ್ತ
ಒಂದೇ ಒಂದು ಇಪ್ಪತ್ತು ವರ್ಷ ಹುಟ್ಟಿದಾಗೊಮ್ಮೆ ಬದುಕಿ
ಇಪ್ಪತ್ತಕ್ಕೆ ಇಪ್ಪತ್ತರಷ್ಟು ಪಾಪಗಳಿಸಿ
ಮೇಲೇರಿದ ಗ್ರಾಫ್ ರೇಖೆ,
ಭೂಗತ ಎಲ್ಲಿ ಆಗ್ತದೋ ಎಂಬ ಭಯ ಕಾಡುತ್ತಿರಲು
ಕೃಷ್ಣಾರ್ಪಣವೆನ್ನುತ್ತ
ಕೃತುಫಲಂ ಲಬಂತೆ ನಾತ್ರ ಸಂಶಯಃ
ಪ್ರತಿದಿನಂ ಕುರ್ವಂತು ನೋ ಮಂಗಲಂ ಎಂದು ಹೇಳುತ್ತ
ಕಾಲಯುಕ್ತವಾಗಿ ಕಾಲಯುಕ್ತಿಯಾಗಿ
" ಕಾಲಾಯ ತಸ್ಮೈನಮಃ " ಎಂಬ ರಾಗಕ್ಕೆ
ಗೆಜ್ಜೆಕಟ್ಟಿ ಕಾಲ ಹಾಕಿ ಹೇಗೋ ಹೊಂದಿಸಿಕೊಂಡು
ಕುಣಿಯುತ್ತ
ಮೇಲೇನು ಕೀಳೇನು
ಹಾಲೇನು ಹಾಲಾಹಲವೇನು ಕಷ್ಟೇನು ಸುಖಾ ಏನು
ಎಲ್ಲಾ ಸೇರಿಸಿ ಸುರಿದು ಬೇವೇನು ಬೆಲ್ಲೇನು
ಹಿಂದೆ ಮುಗಿಲ ಚುಂಬಿಸಿದ ನಾವು
ಇಂದು ಭೂಗತವಾಗಿ
ಎಲ್ಲ ಹಳೆ ಲೆಕ್ಕಾ ಬಿಟ್ಟು
ಮುಂದೆ ಕೇವಲ ಮನುಷ್ಯರಾಗಿ, ಮೇಲೇಳಬೇಕು !
ಯಾರ ಆಟವೋ ಏನೋ
ಯಾರಿಗೆ ಚಿನ್ನಾಟ
ಹುಟ್ಟಿ ಸಾಯುವದೊಂದೇ ನಮಗಿರುವ ಪಾಠ.

# ಮರು ಮದುವೆ (ಹರಟೆ)

—ಸಿ. ಎಸ್. ಚಿನ್ನವೀರಯ್ಯ

ನಿಮಗೆಲ್ಲ ಗೊತ್ತಿರುವ ಹಾಗೆ ನನ್ನ ಸ್ನೇಹಿತ ಇದ್ದಾನಲ್ಲ, ಅವನ ಸ್ನೇಹಿತನ ಸ್ನೇಹಿತ, ಅವನ ಸ್ನೇಹಿತನ ಸ್ನೇಹಿತನೊಬ್ಬನಿದ್ದಾನೆ. ಈಗ ಹೇಳಿದ ಸ್ನೇಹಿತ ನನಗೂ ಸ್ನೇಹಿತನೇ ಆಗ ಬೇಕಾಯ್ತಲ್ಲ; Direct ಆಗಿ ಅಲ್ಲದಿದ್ದರೂ Indirect ಆಗಿ ಅವನು ನನ್ನ ದೂರದ ಸ್ನೇಹಿತ ಅಂದಹಾಗೆ ಆಯ್ತು. ಅದಕ್ಕಾಗಿಯೇ ಸಿಕ್ಕಿದಾಗಲೆಲ್ಲಾ ದೂರದಲ್ಲೆ ನಿಂತು ಕೈ ಮುಗಿಯುತ್ತಾನೆ ನನಗೆ ಅವನು ಬಹಳ ಆದರದಿಂದ. ನಿರ್ಗವಿ ಧೃವಕುಮಾರನಿದ್ದ ಹಾಗೆ. ಲಕ್ಷ್ಮೀನಾರಾಯಣನು ವಿನತೆಯೂ ನಂದನನ ಕಂಧರವನೇರಿಬಂದು, 'ಮೆಚ್ಚಿದೆನು' ಮಗನೆ ನೀಮಾಡಿದ ಸುಸಂಸ್ಕೃತಿಗೆ ಅಂದು, 'ನಿನಗೇನು ಬೇಕ. ಕೇಳು' ಅಂದಾಗ ಅವನಂದನಂತೆ 'ಆಶೆ ಬೇರಿಲ್ಲೆನಗೆ ನಿನ್ನ ಪದ ಪಂಕಜದ ದಾಸ ದಾಸನು ದಾಸನಾಗಿರ್ಪುದೇ ಲೇಸು' ಅಂತ. ಇದಲ್ಲವೇ ಗುಣ ಆದ್ರೆ ಇದಕ್ಕೆ ವ್ಯಾಖ್ಯಾನ ಮಾಡ್ತ ಇನ್ನೊಬ್ಬ ಸ್ನೇಹಿತನೆಂದ ದುಷ್ಟರನ್ನು ಕಂಡು ಆದಷ್ಟು ದೂರವಿರಬೇಕು ಅಂತ ಅಂದಿರಬಹುದು' ಎಂದು. ಅವನು ಮೂರ್ಖ ಬಿಡಿ, ಧೃವನಲ್ಲ; ಸ್ನೇಹಿತ ಧೃವನ ಹಾಗೆಯೇ ಆ ನನ್ನ ಸ್ನೇಹಿತನಿಗೆ ನನ್ನಲ್ಲಿ ಭಕ್ತಿ, ಆದರೆ ನನ್ನಲ್ಲಿ ವಿಷ್ಣುವಿನ ಶಕ್ತಿಯಿಲ್ಲ.

ಅವನದು ಚಿಕ್ಕ ಚೊಕ್ಕ ಸುಂದರ ಸುಖ ಸಂಸಾರ. ಹರೆಯದ ದಂಪತಿಗಳು ಹೋಗದ ಪಾರ್ಕಿಲ್ಲ ನೋಡದ ಸಿನಿಮಾ ಇಲ್ಲ. ರಜಾ ಬಂತು ಅಂದ್ರ ಮಾರ್ನಿಂಗ್ ಷೋ ಇಂದ ಹಿಡಿದು ಸೆಕೆಂಡ್ ಷೋ ಕೂಡ ನೋಡಿಬರ್ತಿದ್ರು. ಪಾಪ! ಇನ್ನು ಅಡಿಗೆ ಮಾಡೋದು ಯಾವಾಗ! ಬ್ರೆಡ್ಡೋ ಬನ್ನೋ ತಂದು ರಾತ್ರಿ ಕಳೆದು ಬಿಡುತ್ತಿದ್ದರು. Economy ಅಂದ್ರೇನು ಅನ್ನೋದೇ ಗೊತ್ತಿಲ್ಲ ಅವರಿಗೆ. ಬಳೇ ಅಂಗ್ಡಿಯಿಂದ ಹಿಡಿದು ಬಂಗಾರದ ಅಂಗ್ಡೀವರೆಗೂ ಹರಡಿತ್ತು ಅವರ ಪರ್ಸಿನ ವೈಶಾಲ್ಯ. ಸಾಧ್ಯ ಇದ್ರೆ ಹೆಂಡ್ತೀನ ಪಾಕೆಟ್ನಲ್ಲೇ ಇಟ್ಕೊಳ್ತಿದ್ನೋ ಏನೋ ಅವನು, ಆದರೆ ದರ್ಜಿ ಅವನ ಪೋಷಣೆಗೆ ಅಂಥ ದೊಡ್ಡ ಪಾಕೆಟ್ ಹೊಲೆದಿರಲಿಲ್ಲ. ಆ ಸಾಹಸ ಮಾಡಿರಲಿಲ್ಲ. ಅದಕ್ಕಾಯೇ ಆ ಸ್ನೇಹಿತ ತನ್ನ ಹೆಂಡತೀನ ಮನೆಯಲ್ಲೇ ಬಿಟ್ಟು ಆಫೀಸ್ಗೋಗ್ತಾ ಇದ್ದ. ಫೈಲಿನ ಪ್ರತಿ ಪುಟದದಲ್ಲೂ ಅವಳ ದರ್ಶನವೇ ಆಗ್ತಾ ಇತ್ತಂತೆ ಅವನಿಗೆ. ಅಂಥ ಮುದ್ದು ಹೆಂಡತಿ, ಅಂಥ ಜೋಡಿ ಅವರದು. ನನಗಂತೂ ಅವರನ್ನು ಕಂಡು ತುಂಬ ಆನಂದವಾಗುತ್ತಿತ್ತು. ನನಗೆ ಅದೇಕೆ ಇಷ್ಟು ಜಾಗ್ರತೆ ಅಷ್ಟು ವಯಸ್ಸಾಯಿತು? ಇನ್ನೂ ಇಪ್ಪತ್ತು ವರ್ಷ ಚಿಕ್ಕವನಾಗಿದ್ದರೆ ನಾನೂ.......... ನನ್ನವಳನ್ನ .......... ಅವನ ಹಾಗೆ .......... ಸ್ಕೂಟರ್ ಮೇಲೆ ಕೂರಿಸ್ಕೊಂಡು .......... ಛೆ! ಇನ್ನೊ ಏನೇನೊ ಅಂದುಕೊಳ್ಳುತ್ತಿದ್ದೆ. ಅನ್ನುತ್ತಿರಲಿಲ್ಲ; ಅಂದುಕೊಳ್ಳುತ್ತಿದ್ದೆ, ಅಷ್ಟೆ.

ಹೀಗೆ ಅವರ ದಾಂಪತ್ಯ ಜೀವನ ಹತ್ತು ಹದಿನೈದು ವರ್ಷ ಕಳೆಯಿತು. ಹನ್ನೆರಡು ವರ್ಷದ ಒಬ್ಬನೇ ಮಗ ಕುಟುಂಬ ಯೋಜನೆಯನ್ನು ಕರಗತ ಮಾಡಿಕೊಂಡಿದ್ದ. ಅವಳಿಗೆ ಹೆಣ್ಣುಮಗಳ ಆಶೆಯಾದಾಗ ಇನ್ನೂ ನಾಲ್ಕು ವರ್ಷ ಕಳೆಯಲಿ ಎಂದಿದ್ದ. ಮೂರು ವರ್ಷ ಕಳೆದವು, ನಾಲ್ಕನೇವರ್ಷ. ಹೆಂಡತಿ ತನ್ನಾಶೆಯನ್ನು ತೀರಿಸಿಕೊಳ್ಳುವದರಲ್ಲಿದ್ದಳು. ಈ ಸಲ ಹೆಣ್ಣು ಅನ್ನುತ್ತಿದ್ದಳು. ದಿನವೆಲ್ಲಾ ಇದೇ ಪ್ರೇಮ ಕಲಹ. ಕಲಹ ಅಂದಕೂಡಲೇ ಜ್ಞಾಪಕಕ್ಕೆ ಬರುತ್ತೆ, ಹೆಂಡತಿಗೆ ಕಪಾಳ ಸೇವೆ ಮಾಡಿದ ಗಂಡಂದಿರನ್ನೂ ಕಂಡಿದ್ದೇನೆ. ಕೋತಿ ಪರಚಿದಂತೆ ಗಂಡನ ಮುಖ ಪರಚಿ ಪ್ಲಾಸ್ಟರ್ ಹಚ್ಚಿದ ಹೆಂಡತಿಯರನ್ನೂ ಕಂಡಿದ್ದೇನೆ. ಪಾಪ ಈ ನನ್ನ ಸ್ನೇಹಿತ ಒಂದು ದಿನವಾದರೂ ಜಗಳವಾಡಲಿಲ್ಲ. ಗಂಡನಿಗೆ ತಕ್ಕ ಹೆಂಡತಿ ಅವಳು ಸಾಧ್ವಿ. ವಿಧಿಗೆ ಹೊಟ್ಟೇ ಉರಿ ಬಂತೂ ಅಂತ



ಕಾಣುತ್ತೆ. ಅವನಿಗಾಗಲೇ ನಲವತ್ತೈದು. ಅವಳ ಮೂವತ್ತನೇ ವಯಸ್ಸಿನಲ್ಲಿ ಹೆಣ್ಣು ಕೂಸಿನ ಬಯಕೆ ಪೂರೈಸುವ ಮೊದಲೇ ಹರ ಹರಾ ಅಂದುಬಿಟ್ಟಿದ್ದಳು, ಹೆರಿಗೆಯಾಗುವುದಕ್ಕೆ ಮೊದಲೆ.

ಅಂಥ ಹೆಂಡತಿಯ ಗಂಡ ಅವನು. ಅಲುಬಿದ, ಅತ್ತ, ವರಲಿದ, ವಿರಾಗಿಯಾದ. ಊರ ಹೊರಗೆ ಹುಡುಗರು ನಿರ್ಮಿಸಿದ್ದ ಗುಡಿಸಿಲೊಂದರಲ್ಲಿ ಬಿಡಾರಮಾಡಿದ ಆದರೂ ಮರ್ಕಟನಂಥ ಮನಸ್ಸು ವೈರಾಗ್ಯದ ಮುಳ್ಳುಬೇಲಿಯನ್ನು ಬದಿಗೊತ್ತಿ ಅತ್ತಿಂದಿತ್ತ ಇತ್ತಲಿಂದ ಅತ್ತ ಹಾರಾಡತೊಡಗಿತು. ಸ್ವಾಮಿ ವಿವೇಕಾನಂದರ ಚಿತ್ರಪಟವೊಂದನ್ನು ಎದುರಿಗೆ ನೇತುಹಾಕಿದ ನಾಸಿಕಾಗ್ರದಲ್ಲಿ ಅವರ ದೃಷ್ಟಿಯನ್ನಿಟ್ಟು ಧ್ಯಾನಿಸಿದ ಭ್ರೂ ಮಧ್ಯದಲ್ಲಿ ಅವರ ಮೂರ್ತಿಯನ್ನು ಸ್ಥಾಪಿಸಿಕೊಂಡು ಧ್ಯಾನಿಸತೊಡಗಿದ. ಆದರೆ ನಿಮಿಷಾರ್ಧದಲ್ಲಿ ಮನಸ್ಸಿನ ದೃಢತೆ. ಮುರಿದು ಬಿಡಿತ್ತು ವಿವೇಕಾನಂದರ ಗುರು ರಾಮಕೃಷ್ಣಪರಮಹಂಸರ ಚಿತ್ರ ಬಂತು. ವಿವೇಕಾನಂದರ ಚಿತ್ರಪಟ ಜಾರಿ ಸರಿಯಿತು ದೃಷ್ಟಿಪಥದಿಂದ ಶಾರದಾಮಣಿ ದೇವಿಯವರ ಚಿತ್ರ ಅವನ ಮುಂದೆ ನಿಂತು ನಸುನಕ್ಕಿತು. ಮನೋದಾರ್ಢ್ಯ ಎಡವಿತು. ತಾನೇಕೆ ಮತ್ತೆ .......... ಮದುವೆಯಾಗ ಬಾರದು ಅಂದುಕೊಂಡ ಆ ನನ್ನ ದೂರದ ಸ್ನೇಹಿತ ಆದರೂ ಆ ನನ್ನ ಸ್ನೇಹಿತ ನೋಡುವವರಿಗೆ ಸಾಧಕನಂತೇ ಕಾಣತೊಡಗಿದ.

ಆದರೆ ಅವನ ವೈರಾಗ್ಯ ಅಡವಿ ಪಾಲಾಗುತ್ತಿದ್ದುದನ್ನು ಕೆಲವು ಕನ್ಯಾಪಿತೃಗಳು ಗಮನಿಸದಿರಲಿಲ್ಲ. ಸರಿ ಮಧ್ಯವರ್ತಿಗಳ ಪ್ರವೇಶವಾಯಿತು, ಪ್ರಪಂಚವನ್ನು ಕಣ್ಣುಬಿಟ್ಟು ನೋಡುವಂತೆ ಹೇಳಿದರು. ಮರ ಹುಟ್ಟಿಬಿದ್ದಂತೆ ಆದರೆ ಪ್ರಯೋಜನವೇನು ಅಂದರು. ಅಂತೂ ಸುಸ್ತನಾಗಿದ್ದ ಅವನ ಆಶಾಗಂಗೆ ಹರಿಯುವಂತೆ ತಿರುವು ಕೊಟ್ಟರು. ಏಕಾಗಬಾರದು ಎಂದು ಯೋಚಿಸಿದ ಅಂತೂ ಮದುವೆಯಾಗುವ ತೀರ್ಮಾನಕ್ಕೆ ಬಂದ. ವಯಸ್ಸು ಮೀರಿಲ್ಲ, ತಿರುಗಾಡುವ ದಾರಿಯಲ್ಲಿ ಎಡವುಕಲ್ಲುಗಳಿರುತ್ತವೆ. ಮುಗ್ಗರಿಸುವ ಅವಕಾಶಗಳು ಅಮಿತವಾಗಿರುತ್ತವೆ, ಮುಪ್ಪಿನಕಾಲಕ್ಕೆ ಊರುಗೋಲು ಯಾರಾದಾರೂ ಬೇಕೇ ಬೇಕು ಹೀಗೆ ಹಲವಾರು ಜನ ಹಲವಾರು ರೀತಿಯಲ್ಲಿ ಹೇಳಿದ್ದ ಮಾತುಗಳ ಅವನ ಕಿವಿಯಲ್ಲಿ ಯಾವಾಗಲೂ ಮದ್ದಳೆಯಂತೆ ಮೊಳಗುತ್ತಿದ್ದವು ಅಂದ ಮೇಲೆ ಮದುವೆಯಾಗದೆ ಇರುವುದುತಾನೆ ಹೇಗೆ!

ನಾಲ್ಕಾರು ದಿನಗಳು ಉರುಳಿದವು. ಕನ್ಯಾಪಿತೃ ಒಬ್ಬ ವಕ್ಕರಿಸಿದ. ತಮ್ಮನ್ನ ಕನ್ಯಾಸೆರೆಯಿಂದ ಬಿಡಿಸಿ ಪುಣ್ಯಕಟ್ಟಿಕೊಳ್ಳಿ ನನ್ನ ಮಗಳು ಹಾಗೆ, ಹೀಗೆ ಎಂದು ತನ್ನ ಮಗಳ ಗುಣಗಾನ ಮಾಡಿದ ತಿದ್ದಿದ ಗೌರಿಯಂತಿರುವ ತನ್ನಮಗಳು ಅವನಿಗೆ ಸರಿಯಾದ ಮಡದಿ. ಸದ್ಗೃಹಿಣಿಯರಲ್ಲಿ ಇರಬೇಕಾದ ಗುಣಗಳೆಲ್ಲಾ ಅವಳಲ್ಲಿ ತುಂಬಿವೆ. ಅವಳನ್ನು ಕೈ ಹಿಡಿದು ಮುಂದಿನ ಜೀವನವನ್ನು ಸುಖವಾಗಿ ಕಳೆಯಿರಿ ಅಂದ. ನನ್ನ ಸ್ನೇಹಿತನಿಗೆ ಮನಸ್ಸು ಕರಗಿತು. ಮದುವೆಯಾಗುವುದೊಂದೇ ತನ್ನ ಜೀವನದ ಗುರಿಯಲ್ಲದಿದ್ದರೂ ಕನ್ಯಾಸೆರೆ ಬಿಡಿಸುವುದರಿಂದ ಬರುವ ಪುಣ್ಯದ ಪ್ರತಿರೂಪವೇ ಅವಳಾಗಿ ಬಂದು ತಾನು ಸ್ವರ್ಗ ಸುಖವನ್ನು ಅನುಭವಿಸಬಹುದು ಅಂದುಕೊಂಡ. ಕನ್ಯಾಪಿತೃ ಅಂಗಲಾಚಿದ, ಕಾಡಿದ. ಬೇಡಿದ. ಬರುವುದಾಗಿ ಸ್ನೇಹಿತ ಹೇಳಿಸಿದ. ಅವನು ಅಂದರೆ ಕನ್ಯಾಪಿತೃ ಹರ್ಷದಿಂದ ಗದ್ಗದಿತನಾಗಿ, ನಮ್ರತೆಯಿಂದ ಭಾವಿ ಹಳಿಯನಿಗೆ ಕೈಮುಗಿದು ವಾಗ್ದಾನ ತೆಗೆದುಕೊಂಡು ಹೊರಟುಹೋದ. ಸ್ವಲ್ಪಹೊತ್ತಿನಲ್ಲೇ ಹಿಂತಿರುಗಿ ಬಂದು ಆ ನನ್ನ ಕನ್ಯಾರ್ಥಿ ಸ್ನೇಹಿತ ಬರುವ ದಿನವನ್ನು ಗೊತ್ತುಪಡಿಸಿಕೊಂಡು ಹೋಗುವುದನ್ನು ಮರೆಯಲಿಲ್ಲ.

ಈಗ ವಿಧುರ ಸ್ನೇಹಿತ ಮದುಮಗನಾಗುವವನು ತಾನೆ! ವೈರಾಗ್ಯದ ಹುಟ್ಟನ್ನೇ ಹಡಗಿಸಲು ಹೊರಟಬಿಟ್ಟ ಅವನು ತನ್ನ ಹತ್ತಿರದ ಸ್ನೇಹಿತನೊಬ್ಬನಿಗೆ ವಿಷಯ ತಿಳಿಸಿದ. ಆ ಸ್ನೇಹಿತ ಭೋಜನಪ್ರಿಯ. ಕನ್ಯಾರ್ಥಿಯಾಗಿ ಹೋಗುವವನ ಜೊತೆಯಲ್ಲಿ ಹೋದರೆ, ಹೋಗುವವರಿಗಿಂತ ಜೊತೆಯಲ್ಲಿ ಹೊಗುವವರಿಗೇ ಹೆಚ್ಚು ಸ್ಥಾನಮಾನ, ಭೋಜನ, ಶಿಪಾರ್ಸುಮಾಡಲು ಪ್ರಾರ್ಥನೆ ಇತ್ಯಾದಿ ಇತ್ಯಾದಿಗಳಿಗೆ ಕೊರತೆಯಿಲ್ಲವೆಂದರಿತಿದ್ದ ಅವನು ಕರೆಯದೇ ಹೋಗಲು ಸಿದ್ಧವಾಗಿರುವ ಅವನನ್ನು ಕರೆದರೆ ಕೇಳಬೇಕೆ! ತುದಿಗಾಲಿನಲ್ಲಿ ಹೊರಟುನಿಂತ.

ಹೆಣ್ಣಿನ ಮನೆಗೆ ಹೋಗುವ ದಿನ ಬಂದೇ ಬಂತು ಇಬ್ಬರೂ ಜಾತಕಪಕ್ಷಿಯಂತೆ ನಿರೀಕ್ಷಿಸುತ್ತಿದ್ದ ದಿನ ಅದು.

ವರನಾಗುವವನು ಕನ್ನಡಿಯ ಮುಂದೆ ನಿಂತ Dress ಮಾಡಿಕೊಂಡ. ಕಣ್ಣುಗಳಲ್ಲಿ ಹೊಳಪು ಕಮ್ಮಿಯಾಗಿದ್ದರೂ ಅವುಗಳನ್ನು ಅರಳಿಸಿ ನೋಡಿಕೊಂಡು ಪರವಾಗಿಲ್ಲ. I love younger than my age ಅಂದುಕೊಂಡ. ಸುಕ್ಕು ಬಿದ್ದ ಮೈ ಚರ್ಮದಕಡೆ ದೃಷ್ಟಿ ಹೋಯಿತು. ಪುಷ್ಟಿಕರವಾದ ಅಹಾರ ಆತ್ಮೀಯಳಾದ ಮಡದಿಯ ಸಂಗ ದೊರೆತರೆ ಸಾಕು ಭೀಮನಾಗಿಬಿಡುತ್ತೀನೆ ಅಂದುಕೊಂಡ ಅವನು. ಅಂತೂ ತನ್ನ ಸಂಗಡಿಗನೊಡನೆ ಹೊರಟೇ ಬಿಟ್ಟ ಆ ವರ, ಅಲ್ಲ ಭಾವೀವರ.

ವಧುವಿನ ಮನೆಯಲ್ಲಿ ಶೈತ್ಯೋಪಚಾರ ನಡೆಯಿತು. ಅವನಿಗಿಂತ ಒಂದೂವರೆಯಷ್ಟು ಹೆಚ್ಚಾಗಿ ಅವನ ಸಂಗಡಿಗನಿದ್ದಾನಲ್ಲ. ಈಗ ಅದನ್ನೂ ಚಂದ ಅಂತಾರೆ ಅಂಥವನನ್ನು ಅವನಿಗೆ ನಡೆಯಿತು. ಇನ್ನು ಕನ್ಯಾ ಪ್ರದರ್ಶನವಾಗ ಬೇಕಲ್ಲ, ಅದೂ ಆಯಿತು. ನವವಧು ತಾನೆ! ಬಹಳ ಗಂಭೀರವಾಗಿ ಮದಗಜಗದಿಂದ ತಲೆಯ ಮೇಲೆ ಸೆರಗು ಹಾಕಿಕೊಂಡು ಗೌರಮ್ಮ ಬಂದ ಹಾಗೆ ಬಂದಳು. ಪರವೇ ಇಲ್ಲ ಒಳ್ಳೆ ಗಂಭೀರವಾಗಿದ್ದಾಳೆ ಈಗಿನ ಕಾಲದ ಹುಡುಗಿಯರಂತೆ ಬಣ್ಣದ ಚಿಟ್ಟೆಯಲ್ಲ ಅಂದುಕೊಂಡವನು. ಆದರೆ ಅವಳ ಗ್ರಹಚಾರ! ಸೆರಗು ಜಾರಬೇಕೆ ಅವಳೇನೋ ಥಟ್ಟನೆ ಸರಿಪಡಿಸಿಕೊಂಡಳು. ಆದರೆ ಆ ವಿರಕ್ತವರನ ಹದ್ದಿನ ಕಣ್ಣಿಗೆ ಅವಳ ಹರುಕಲು ಕಿವಿ ಕಾಣದೇ ಇರಲಿಲ್ಲ. ಹಾಗೆ ಕಂಡುದಾಗಿ ಅವನು ತೋರ್ಪಡಿಸಿಕೊಳ್ಳಲೂ ಇಲ್ಲ. ವಧುವನ್ನು ನೋಡಿ ಮೆಚ್ಚಿಕೊಂಡವನಂತೆ ತೋರ್ಪಡಿಸಿಕೊಂಡು ಬೆಳಗಾದ ಕೂಡಲೆ ಪರಾರಿಯಾದ ವರ. ಆಮೇಲೆ ತಿಳಿಯಿತಂತೆ ಆ ಹುಡುಗಿ ಬಜಾರಿ ನಲ್ಲಿಯ ವ್ಯಾಜ್ಯ ಅವಳ ಕಿವಿ ಮುಳುವಾಯತಂತೆ ಅಂತ. ಗೆದ್ದೆ ಅಂದುಕೊಂಡ. ತನಗೆ ಶಕುನ ಸರಿಬರಲಿಲ್ಲ ಅಂತ. ಕನ್ಯಾ ಪಿತೃವಿಗೆ ಬರೆದನಂತೆ. ಕನ್ಯಾಪಿತೃ ಆಮೇಲೆ ಹಾರಾಡಿಕೊಂಡರಂತೆ ಎರಡನೆ ಮದುವೆ ಅಂತಗೊತ್ತಿದ್ದರೆ ಅವನನ್ನು ನಮ್ಮ ಮನೆಯ ಹೊಸ್ತಿಲನ್ನೇ ಹತ್ತಿಸುತ್ತಿರಲಿಲ್ಲ ಅಂದುಕೊಂಡರು.

ನಾಲ್ಕಾರು ದಿನಗಳುರಳಿದ ಮೇಲೆ ಇನ್ನೊಬ್ಬ ಕನ್ಯಾ ಪಿತೃವಿನ ಆಗಮನವಾಯಿತು. ಈಗ ಮದುವೆಗಾಗಿ ಹಂಬಲಿಸುತ್ತಿದ್ದ ಆ ವಿದುರಅವರ ನ್ನು ಆತ್ಮೀಯವಾಗಿ ಸ್ವಾಗತಿಸಿದ ಅವನ ಚೇಲಾನೋ ಅಥವಾ ಚಂಚಾನೋ ಇದ್ದನಲ್ಲ ಅವನೂ ಆದಿನ ಅಲ್ಲೇ ಇದ್ದ "ತಾವು ದಯಮಾಡಿಸಿದಿರಿ, ತಮ್ಮ ಅತಿಥ್ಯಮಾಡಲು ಇಲ್ಲಿ ಯಾರೂ ಇಲ್ಲ, ಇದಕ್ಕಾಗಿ ನಮಗೆ ದುಃಖವಾಗುತ್ತದೆ" ಅಂದ ಅವನ ಪರ ವಕಾಲತ್ತುವಹಿಸಿ, "ಪರವಾಗಿಲ್ಲಬಿಡಿ" ಅಂದ ಅವರು "ಶುಭಸ್ಯ ಶೀಘ್ರಂ, ನೀವು ಹೂ ಅನ್ನಿ ಎಲ್ಲ ಏರ್ಪಾಡುಗಳನ್ನು ಮಾಡಿಬಿಡುತ್ತೀನೆ. ನೀವೇನೂ ತರಬೇಡಿ ತೊಂದರೆ ತಾಪತ್ರಯವೇ ಬೇಡ" ಅಂದರು ನಮ್ರತೆಯಿಂದ. "ಏನಯ್ಯಾ ಏನಂತೀಯ?" ಅಂದ ಚೇಲ. ವರ, "ಆಯ್ತು ನೋಡಿಕೊಂಡು ಬರೋಣ" ಅಂದ ಸರಿ ಒಂದು ತಾರೀಖು ಗೊತ್ತು ಮಾಡಿದರು. ವರನ ಸವಾರಿ ದಯಮಾಡಿಸಿತು, ಕನ್ಯಾ ಪರೀಕ್ಷೆಗಾಗಿ. ಹುಡುಗಿಯೇನೋ ತಕ್ಕಮಟ್ಟಿಗೆ ಇದ್ದಳು ವರನಾಗುವವನು ಒಪ್ಪಿದ. ಚೇಲನಿಗೆ ಪರಮಾನ್ನ ಉಂಡಷ್ಟು ಸಂತೋಷವಾಯ್ತು ವಧುವು ಅವನನ್ನು ನೋಡಿ ಕಸಿವಿಸಿಗೊಂಡಂತೆ ಕಂಡಳು. ಅರಳಿದ ಬಿರಿಮುಗುಳಿನಂತಿದ್ದ ಆ ಕನ್ಯೆಯನ್ನು ತಲೆನೆರೆತು, ಕೊಂಚ ಸೊಂಟ ಬಾಗಿದ ವರ ಒಪ್ಪುವುದರಲ್ಲಿ ಆಶ್ಚರ್ಯವೇನಿಲ್ಲ ಆದರೆ ಆ ಹುಡುಗಿ! ಲಗ್ನಪತ್ರಿಕೆಗಳನ್ನು ರವಾನಿಸಿ ಆಯ್ತು, ಮುಹೂರ್ತದ ಹಿಂದಿನ ದಿನ ವರನ ಸವಾರಿ ದಯಮಾಡಿಸಿತು; ಆದರೆ ಇದುರುಗೊಳ್ಳಲು ಯಾರೂ ಬರಲೇ ಇಲ್ಲ. ವರನಿಗೆ ಆಶ್ಚರ್ಯದ ಮೇಲೆ ಆಶ್ಚರ್ಯವಾಯಿತು. ವಿಧಿಯಿಲ್ಲ, ವಿಚಾರಿಸಿದ ಆದರೆ ವಧುವನ್ನು ಆದುವರೆಗೂ ಪಟ್ಟಶ್ರಮವೆಲ್ಲ ವ್ಯರ್ಥವಾಯಿತು. ಅವಳು ಕೊನೆಗೂ ಒಪ್ಪಲೇ ಇಲ್ಲ. ಆದರೂ ಇಟ್ಟಲಗ್ನ ತಪ್ಪಿಸಲು ಆಗದೆ ಎಷ್ಟೋ ಕಷ್ಟಪಟ್ಟು ಸರಿಯಾದ ವರನೊಬ್ಬನನ್ನು ತಂದು, ಅವರು ಮದುವೆ ಮಾಡೇಬಿಟ್ಟರು. ವರನಾಗಬೇಕಾಗಿದ್ದ ಆ ನನ್ನ ಸ್ನೇಹಿತ ಅತಿಥಿಯಾಗೇ ಉಳಿದುಕೊಂಡನಂತೆ. ಮಂಗಳವಾದ್ಯಗಳು ಮೊಳಗುತ್ತಿದ್ದವು. ಅಂತೂ ಆ ಸುಮುಹೂರ್ತದಲ್ಲಿ ಅವಳನ್ನು ಕನ್ಯಾ ಪಿತೃ ಧಾರೆಯೆರೆದ. ವಿಧಿಯಿಲ್ಲದೆ ಆ ನನ್ನ ಸ್ನೇಹಿತನೂ ಧಾರೆಯೆರೆದು ಬಂದನಂತೆ. ಎಂಥ ಅನ್ಯಾಯ!

ಅಂತೂ ಆ ನನ್ನ ದೂರದ ಸ್ನೇಹಿತನಿಗೆ ಇನ್ನೂ ಕಂಕಣ ಒದಗಿಬಂದಿಲ್ಲ ಇಲ್ಲಿಗೆ ಐದಾರು ವರ್ಷಗಳಿಂದ ಕನ್ಯಾನ್ವೇಷಣೆ ಮಾಡುತ್ತಲೇ ಬಂದಿದ್ದಾನೆ. ಹಂಬಲ



ಇನ್ನೂ ತಪ್ಪಿಲ್ಲ ಈಗವನಿಗೆ ಆಗಲೆ ಐವತ್ತೈದು; ಅರವತ್ತರ ಹರೆಯ. ಆದರೆ ಅವನಿಗೆ ಹದಿನೆಂಟು ವರ್ಷದ ಬಿರಿಮುಗುಳೇ ಬೇಕು, ಮರೆತೇಬಿಟ್ಟೆ ಕಳೆದವರ್ಷ ಒಂದು ತಮಾಷೆ ನಡೆಯಿತಂತೆ. ಅವನು ನನ್ನೊಂದಿಗೆ ಹೇಳಲಿಲ್ಲ, ಅವನ ಚೇಲ ಹೇಳಿದ ಅಂತ ಇಟ್ಕೊಳ್ಳಿ, ಆ ಸ್ನೇಹಿತ ಕನ್ಯಾಪರೀಕ್ಷೆಗಾಗಿ ಕಳೆದ ವರ್ಷ ಅದು ಯಾರಮನೆಗೋ ಹೋಗಿದ್ದನಂತೆ, ಅವನಿಗೆ ಕಾಫಿ ಕೊಡುವಂತೆ ಬಲವಂತ ಮಾಡಿದರಂತೆ, ಹುಡುಗಿಯ ಆಟ ಅವರ ಮುಂದೆ ನಡೆಯಲೇ ಇಲ್ಲ. ನಿರ್ವಾಹವಿಲ್ಲದೆ ಆ ಹುಡುಗಿ ಕಾಫಿ ತಂದಳಂತೆ, ಅವಳ ರೂಪಶ್ರೀಯನ್ನು ನಿಬ್ಬೆರಗಾಗಿ ನೋಡಿದನಂತೆ ವರನಾಗಬೇಕಾಗಿದ್ದ ಅವನು ಹುಡುಗಿಗೆ ಅವನ ನೋಟ ಕಾರೆಮುಳ್ಳಿನಿಂದ ಚುಚ್ಚಿದಂತಾಯಿತಂತೆ. "ತಾತ! ತಗೊಳ್ಳಿ ಕಾಫಿ ತಂದಿದ್ದೀನಿ ಅಂದಳಂತೆ ಆ ಹುಡುಗಿ. ಅಲ್ಲಿಂದ ಹೊರಟರೆ ಸಾಕು ಅಂದುಕೊಂಡನಂತೆ ಪಾಪ ಅವನು. ಬೆಳಗಾದ ಕೂಡಲೆ ಹೇಳದೆ ಕೇಳದೆ ಹೊರಟು ಬಿಟ್ಟನಂತೆ. ಈವಿಷಯವನ್ನು ಚೇಲ ನನ್ನೊಂದಿಗೆ ಹೇಳಿಕೊಂಡು ಬಿದು ಬಿದ್ದು ನಕ್ಕ ಪಾಪ! ಅಂದುಕೊಂಡೆ ನಾನು.

## ವಿವಾದಾಸ್ಪದ ಶರಣರ ಸ್ಥಳಗಳು ಹಾಗೂ ಪುರಾಣ

**ಶಂಕರದಾಸಿಮಯ್ಯ ಮತ್ತು ದೇವರದಾಸಿಮಯ್ಯ**

1. ಕ. ವಿ. ವಿ. ಪ್ರಕಟನೆಯಾದ "ಶ್ರೀ ಶಂಕರದಾಸಿಮಯ್ಯ" ಪುರಾಣದಲ್ಲಿ ಶ್ರೀ ಎಸ್. ಎಸ್. ಬಸವನಾಳರು ಮತ್ತು ಡಾ. ನಂದೀಮಠರು ಈ ಕೃತಿಯನ್ನು ಬಳ್ಳಾರಿ ಜಿಲ್ಲಾ ಹೂವಿನಹಡಗಲಿಗೆ 4 ಮೈಲುಪೂರ್ವ ದಿಕ್ಕಿಗೆ "ಹೊಳಗುಂದಿ" ಗ್ರಾಮದ ಕವಿ "ಮಲ್ಲಿಕಾರ್ಜುನ" ಎಂಬಾತನು ಬರೆದಿದ್ದಾನೆಂದು ಹೇಳಿದ್ದಾರಂತೆ. ಅಲ್ಲಿ ಕಲ್ಲೇಶ್ವರ ಗುಡಿ ಹಾಗೂ ಶಾಸನವಿದೆ. ಈಗ ಅದಕ್ಕೆ "ಕಲ್ಲುಡಿ" ಎನ್ನುತ್ತಾರೆ. ಈ ಅಂಶದಲ್ಲಿ ಸತ್ಯವಿದೆ. ಆದರೆ ಈ ಕೆಳಗಿನವು-ಅನುಮಾನಶಂಕೆ ಮೂಡಿಸುತ್ತವೆ:–
2. ಕ. ವಿ. ವಿ. ಪ್ರಕಟನೆ ಮತ್ತು ಸಿದ್ಧಯ್ಯ ಪುರಾಣಿಕ ಮತ್ತು ಶಾಂತರಸರ ಇತರ ಪುಸ್ತಕಗಳಲ್ಲಿ ಈ ಶರಣರು ರಾಯಚೂರು, ಕಲಬುರ್ಗಿ, ಬಿಜಾಪುರಕ್ಕೆ ಸೇರಿದ ಸ್ಥಳದವರು ಎಂದು ಬರುತ್ತದೆ. ಇಲ್ಲಿ ನಮಗೆ ಶಂಕೆ ಹಾಗೂ ಅನುಮಾನ.
3. ಏಕೆಂದರೆ ಬಳ್ಳಾರಿ ಜಿಲ್ಲೆ ಹೂವಿನ ಹಡಗಲಿ ತಾಲ್ಲೂಕಿನ 4 ಮೈಲಿನಲ್ಲಿ "ಹೊಳಗುಂದಿ" ಇದೆ. ಇದರ ಸುತ್ತ-ಮುತ್ತ 5–10 ಮೈಲಿನಲ್ಲಿ ತುಂಗಾಭದ್ರ ನದಿ ದಂಡೆ ಮೇಲೆ "ಕಂದಗಲ್ಲು" ಗ್ರಾಮ (ಗುರು ಗೋವಿಂದಭಟ್ಟರದು)," ಪುರ," "ಕೊಟ್ನೆಕಲ್ಲು, ಕೊಟ್ನೇಕಲ್ಲೇಶ್ವರ," ನೌಲಿ, "ಮೈಲಾರ" ಗ್ರಾಮಗಳಿವೆ ಶಂಕ್ರದಾಸಿಮಯ್ಯನವರಿಗೆ ಮೈಲಾರದ ಪರ್ವತ ಮತ್ತು ಉಜ್ಜನಿ ರಾಜರು ಬಿಳಿ ಕೊಡೆ ಹಿಡಿದು ಸನ್ಮಾನಿಸಿದರಂತೆ ಇವೆರಡು ಬಳ್ಳಾರಿ ಜಿಲ್ಲೆಯಲ್ಲಿವೆ "ಮುದೇನೂರು," "ನಂದಿಹಳ್ಳಿ," ಸೋಗಿ, "ಉತ್ತಂಗಿ," ಹೊಳಗುಂದಿ"ಗೆ 5–6 ಮೈಲಿನಲ್ಲೇ ಇವೆ. ಇಲ್ಲೆಲ್ಲಾ ಶಿಲಾಶಾಸನಗಳಿವೆ ನೌಲಿಯಲ್ಲಿ ಜಡೆಶಂಕರಲಿಂಗನ ದೇವಸ್ಥಾನ, ಕೊಟ್ನೇಕಲ್ಲಿನಲ್ಲಿ ಕಲ್ಲೇಶ್ವರ ದೇವಸ್ಥಾನ ಮತ್ತು ಶಾಸನ ಮುದೇನೂರಲ್ಲಿ ರಾಮನಾಥ ಮತ್ತು ಲಕ್ಷ್ಮಣನ ದೇವಸ್ಥಾನಗಳು ಮತ್ತು ಶಾಸನಗಳು, ಮೈಲಾರದಲ್ಲಿ ಲಿಂಗೇಶ್ವರ ದೇವ ಸ್ಥಾನ-ಶಾಸನ, ಉಜ್ಜನಿ ಸಂಸ್ಥಾನ–ಶಾಸನಇವೆ. ಕಾರಣ ಈ ಶರಣರು ಹಾಗೂ ಸ್ಥಳಗಳು ಬಳ್ಳಾರಿ ಜಿಲ್ಲೆಯಲ್ಲೇ ಸಂಬಂಧಪಟ್ಟವೆಂದು ಹೇಳಬಹುದು ಸಂಶೋಧಕರು ಈ ಕಡೆ ಗಮನವೀಯಲೆಂದು ಪ್ರಾರ್ಥನೆ–ಸೂಚನೆ.

# ಕನ್ನಡದ ಪಾಣಿನಿ ಕೇಶಿರಾಜ

—ಹಂಪ ನಾಗರಾಜಯ್ಯ

ಕನ್ನಡ ಶಾಸ್ತ್ರ ಸಾಹಿತ್ಯದಲ್ಲಿ ಕೇಶಿರಾಜನ ಸ್ಥಾನ ಸುಭದ್ರ- ಅವನು ಕನ್ನಡದ ಪಾಣಿನಿಯೂ ಹೌದು. ಅದನ್ನು ಮಾನ್ಯ ಲೇಖಕರು ಇಲ್ಲಿ ಸಾಧಾರವಾಗಿ ಶೃತಪಡಿಸಿದ್ದಾರೆ. ಸಂ.

ಸಿರಿಗೀಕ್ಷಿಪರ ಸಚಿತ್ರಂ  
ಸರಸತಿಗೆರಡನೆಯ ಬೀಣೆಯೆನೆ ಸೌಭಾಗ್ಯಂ।  
ಕರಮಾದುದೆಂದು ಬುಧರಾ  
ದರಿಪರ್ ಮೆಚ್ಚೆಂದೆ ಶಬ್ದಮಣಿ ದರ್ಪಣಂ ॥

ಕನ್ನಡ ಭಾಷೆಯ ಹಳೆಯ ಹೊತ್ತಗೆಗಳಲ್ಲಿ ಅನೇಕ ಇನ್ನೂ ಬೆಳಕು ಕಂಡಿಲ್ಲ. ಅಚ್ಚಾಗಿರುವ ಹಳೆಯ ಹೊತ್ತಗೆಗಳಲ್ಲಿಕೂಡ ಒಂದಕ್ಕಿಂತ ಹೆಚ್ಚುಮುದ್ರಣ ನೋಡದ ಗ್ರಂಥಗಳೇ ಹೇರಳ. ವಸ್ತುಸ್ಥಿತಿ ಹೀಗಿರುವಾಗ ವ್ಯಾಕರಣವೊಂದು ಹಲವಾರು ಮುದ್ರಣ ಕಂಡಿರುವುದು ಸೋಜಿಗವೇ ಸರಿ. ಆ ಭಾಗ್ಯಕ್ಕೆ ಪಾತ್ರವಾದ ಅಪೂರ್ವ ವ್ಯಾಕರಣವೇ ಕೇಶಿರಾಜನ ಶಬ್ದಮಣಿ ದರ್ಪಣ.

ಕೇಶಿರಾಜನ ಶಬ್ದಮಣಿ ದರ್ಪಣ ರಚಿತವಾಗಿ ಏಳು ಶತಮಾನಗಳಾದವು ಈ ಏಳುನೂರು ವರ್ಷಗಳ ಅವಧಿಯಲ್ಲಿ ಅದು ಹಲವು ಓಲೆಗರಿಗಳ ಮೂಲಕ ಕನ್ನಡ ನಾಡಿನ ಆದ್ಯಂತ ಆಳಿ-ಬಾಳಿದೆ ನಿಟ್ಟೂರು ನಂಜಯ್ಯ ಲಿಂಗಣಾರಾಧ್ಯ ಇವರ ಟೀಕಾ ಸಮೇತ ಬಲ್ಲಿದರ ಸೊತ್ತಾಗಿ ಜೀವಿಸಿದೆ. ಅಚ್ಚಿನ ಅನುಕೂಲ ಕನ್ನಡ ನಾಡಿಗೂ ಕಾಲಿಟ್ಟ ಕಾಲದಿಂದೀಚೆಗೆ ಕೇಶಿರಾಜನ ಕೃತಿ ಕೆಲವಾರು ಹೊಸ ಮುದ್ರಣಗಳನ್ನು ಕಂಡಿದೆ ಆ ವಿವರ ಇಂತಿದೆ.

೧. ಜೆ. ಗ್ಯಾರೆಟ್ ಸಂಪಾದಿತ ಪ್ರತಿ ಪ್ರಕಟವಾದುದು ೧೮೬೮  
೨. ಎಫ್. ಕಿಟೆಲ್ ಸಂಪಾದಿತ ಪ್ರತಿ ( ಮೊದಲ ಮುದ್ರಣ ) ೧೮೭೨  
೩. ಎಫ್. ಕಿಟೆಲ್ ಸಂಪಾದಿತ ಪ್ರತಿ ( ಎರಡನೆಯ ಮುದ್ರಣ ) ೧೯೯೯  
೪. ಪಂಜೆ ಮಂಗೇಶರಾಯರಿಂದ ಪರಿಷ್ಕೃತ ಪ್ರತಿ ೧೯೨೦  
೫ ಕನ್ನಡ ಸಾಹಿತ್ಯ ಪರಿಷತ್ತಿನ ಪ್ರತಿ ಪ್ರಕಟವಾದುದು ೧೯೩೯  
೬. ಮದರಾಸು ವಿಶ್ವವಿದ್ಯಾನಿಲಯದ ಮುದ್ರಣ ೧೯೩೮  
೭. ಡಾ॥ ಡಿ. ಎಲ್ ಎನ್. ಸಂಪಾದಿತ ಪ್ರತಿ ( ಮೊದಲ ಮುದ್ರಣ ) ೧೯೫೯  
೮. ಡಾ॥ ಡಿ ಎಲ್. ಎನ್. ಸಂಪಾದಿತ ಪ್ರತಿ ( ಎರಡನೆಯ ಮುದ್ರಣ ) ೧೯೬೪  
೯. ಎಫ್. ಕಿಟೆಲ್ ಅವರ ಪ್ರತಿಯ ಪರಿಶೋಧಿತ ಪ್ರತಿ ( ಮೂರನೆಯ ಮುದ್ರಣ ) ೧೯೬೫  
೧೦. ಡಾ॥ ಡಿ. ಎಲ್. ಎನ್. ಪ್ರತಿ ( ಮೂರನೆಯ ಮುದ್ರಣ ) ೧೯೬೮  
೧೧. ಶಬ್ದಮಣಿ ಸಂಗ್ರಹ (ಮೊದಲನೆಯ ಮುದ್ರಣ) ೧೯೭೦

ಈ ರೀತಿಯಲ್ಲಿ ಸರಿಯಾಗಿ ಒಂದು ನೂರು ವರ್ಷ ಅಂತರದಲ್ಲಿ ಕೇಶಿರಾಜನ ವ್ಯಾಕರಣ ದಿನೇದಿನೇ ಪರಿಷ್ಕಾರಗೊಂಡು ಹನ್ನೊಂದು ಸಲ ಅಚ್ಚಾಗಿದೆ. ಇದು ಶಬ್ದಮಣಿದರ್ಪಣದ ಜನಪ್ರಿಯತೆಗೂ ಅಂತಸ್ಸತ್ವಕ್ಕೂ ಗ್ರಂಥದ ಹಿರಿಮೆಗೂ ಹಿಡಿದ ರನ್ನಗನ್ನಡಿಯಾಗಿದೆ.

ಕನ್ನಡ ಶಾಸ್ತ್ರ ಸಾಹಿತ್ಯ ಚರಿತ್ರೆಯಲ್ಲಿ ಕೇಶಿರಾಜನ ಸ್ಥಾನ ಸುಭದ್ರ. ಕೇಶಿರಾಜ ಹದಿಮೂರನೆಯ ಶತಮಾನದ ಉತ್ತರಾರ್ಧದಲ್ಲಿ ಆಗಿ ಹೋದ ವೈಯಾಕರಣಿ. ಸುಮಾರು ಕ್ರಿಶ ೧೨೬೦ ಅವನ ಕೃತಿ ರಚನೆಯ ಕಾಲವೆಂದು ಬಲ್ಲಿದರು ಭಾವಿಸಿದ್ದಾರೆ. ಕೇಶಿರಾಜನದು ಹೆಸರಾಂತ ಕವಿಗಳ ಹಾಗೂ ಘನ ಪಂಡಿತರ ಮನೆತನ.



ಹೊಯ್ಸಳ ನರಸಿಂಹ (೧೧೪೧-೧೧೭೩) ನಲ್ಲಿ ಕಟಕೋಪಾಧ್ಯಾಯನಾಗಿದ್ದ ಕವಿ ಸುಮನೋಬಾಣ (೧೧೭೫) ಕೇಶಿರಾಜನ ತಾಯಿಯ ತಂದೆ, ಮಾತಾಮಹ ಸೂಕ್ತಿ ಸುಧಾರ್ಣವದ ಸಂಕಲನಕಾರನೂ ಯೋಗಿ ಪ್ರವರ ವಲ್ಲಭ ಚಿದಾನಂದನೂ ಎನಿಸಿದ್ದ ಮಲ್ಲಿಕಾರ್ಜುನ (ಸು. ೧೨೪೫) ಕೇಶಿರಾಜನ ತಂದೆ. ಕನ್ನಡದ ಹಿರಿಯ ಕಬ್ಬಿಗರಲ್ಲೊಬ್ಬನಾದ ಜನ್ನ (ಸು. ೧೨೩೦) ಕೇಶಿರಾಜನ ಸೋದರ ಮಾವ. ಜನ್ನನ ಗುರು ನಾಗವರ್ಮನು ಕೂಡ ಚಾಲುಕ್ಯ ಜಗದೇಕಮಲ್ಲನಲ್ಲಿ ಕಟಕೋಪಧ್ಯಾಯ. ಈ ಪ್ರಾಜ್ಞ ಪರಿಸರ ಪರಂಪರೆಯ ಪ್ರಸ್ತಾಪವಿರುವ ಕೇಶಿರಾಜನ ಪದ್ಯ :

ಕವಿ ಸುಮನೋಬಾಣನ ಯಾ  
ದವ ಕಟಕಾಚಾರ್ಯನೆಸೆವ ತಾಹಿತ್ರನೆನಾಂ।  
ಕವಿ ಕೇಶವನೆಂ ಯೋಗಿ  
ಪ್ರವರ ಚಿದಾನಂದ ಮಲ್ಲಿಕಾರ್ಜುನ ಸುತನೆಂ॥

ಕೇಶಿರಾಜ ಮೇಲ್ಮಟ್ಟದ ವ್ಯಾಕರಣಕಾರ ನೆಂಬುದು ನಿಜವೆ. ಆದರೆ ಆತ ಸಹಜ ಕವಿಯೂ ಆಗಿದ್ದ ನೆಂಬುದರಲ್ಲಿ ಸಂದೇಹವಿಲ್ಲ "ಕರ್ನಾಟಕ ಲಕ್ಷಣ ಶಿಕ್ಷಾಚಾರ್ಯನು ಕವಿ ಕೇಶಿರಾಜ ವಿರಚಿತಮಪ್ಪ ಶಬ್ದಮಣಿದರ್ಪಣದೊಳ್ " ಎಂಬುದು ಪ್ರತಿ ಪ್ರಕರಣದ ಕಡೆಯಲ್ಲಿ ಬರುವ ಗದ್ಯಭಾಗ. ಇದರಲ್ಲಿ ಶಿಕ್ಷಾಚಾರ್ಯ ಎಂಬುದರ ಜೊತೆಗೆ ಸುಕವಿ ಎಂಬ ವಿಶೇಷಣವೂ ಸೇರಿರುವುದು ಪರಿಭಾವನೀಯ. ಎಂದರೆ ಆತನೇ ತನ್ನ ಬಗೆಗೆ ಶಬ್ದ ಶಾಸ್ತ್ರಕೋವಿದನೆಂಬ ಹೆಗ್ಗಳಿಕೆಯೊಡನೆ ಕಬ್ಬಿಗನೂ ಅಹುದೆಂಬ ಅಭಿಮಾನ ವ್ಯಕ್ತಪಡಿಸಿದ್ದಾನೆ. ಇದಕ್ಕೆ ಇರುವ ಕೆಲವು ಆಧಾರಗಳಲ್ಲಿ ಅವನು ಪ್ರಯೋಗಗಳ ಆಯ್ಕೆಯಲ್ಲಿ ತೋರುವ ಕವಿ ಮನೋಧರ್ಮವೂ ಒಂದೆಂಬುದನ್ನು ಮುಂದೆ ವಿವರಿಸಲಾಗುವುದು. ಕವಿತಾ ಪ್ರೌಢಿಮೆ ಅವನಿಗೆ ಹುಟ್ಟನಿಂದ ಬಂದಂತೆ ತೋರುತ್ತದೆ. ಅವನೇ ಹೇಳಿ ಕೊಂಡಿರುವ ಅವನ ಕೃತಿಗಳು.

ಚೋಳ ಪಾಲಕ ಚರಿತಂ  
ಶ್ರೀಚಿತ್ರಮಾಲೆ  
ಸುಭದ್ರಾಹರಣಂ  
ಪ್ರಬೋಧ ಚಂದ್ರಂ  
ಕಿರಾತಂ ( ? )

ಇದಕ್ಕೆ ಶಬ್ದಮಣಿದರ್ಪಣದ ಸಮಾಪ್ತಿ ಪದ್ಯಗಳಲ್ಲಿ ಒಂದಾದ

ದೊರೆವಡೆದ ಚೋಳಪಾಲಕ  
ಚರಿತಂ ಶ್ರೀಚಿತ್ರಮಾಲೆಯಂತೆ ಸುಭದ್ರಾ।  
ಹರಣಂ ಪ್ರಭೋಧ ಚಂದ್ರಂ  
ಕಿರಾತಮಿವು ಕೇಶಿರಾಜ ಕವಿ ರಚಿತಂಗಳ್ ॥

ಎಂಬ ಪದ್ಯವೇ ಆಧಾರ. ಕೇಶೀರಾಜನ ಕಾರಯಿತ್ರೀ ಪ್ರತಿಭೆಯ ಆವಿಷ್ಕರಣವನ್ನು ನೇರವಾಗಿ ಸಾರುವ ಕಾವ್ಯಗಳು ಈ ಕೃತಿಗಳು ಯಾವುವೂ ದೊರೆತಿಲ್ಲ. ಆದರೂ ಕೇಶಿರಾಜನ ಕಾವ್ಯಶಕ್ತಿಯನ್ನು ನಿರ್ದೇಶಿಸುವ ಪ್ರಮಾಣಗಳು ಶಬ್ದಮಣಿದರ್ಪಣದಲ್ಲೇ ಅಡಗಿವೆ. ಕೇಶಿರಾಜನು ತನ್ನ ವ್ಯಾಕರಣದಲ್ಲಿ ವ್ಯಾಕರಣ ಹಾಗೂ ಭಾಷೆಯ ವೈಶಿಷ್ಟ್ಯವನ್ನು ನಿರೂಪಿಸಿರುವುದರ ಜೊತೆಗೆ ಕಾವ್ಯದ ಚೆಲುವನ್ನು ತಂದಿದ್ದಾನೆ. ಅವನ ಕವಿಸ್ವಭಾವ ಈ ಶಾಸ್ತ್ರ ಕೃತಿಯಲ್ಲೂ ಸೊಗಸಾಗಿ ರೂಪುಗೊಂಡಿದೆ. ಅನೇಕ ಕಾವ್ಯಗಳ ಅಭ್ಯಾಸದಿಂದ ಆರ್ದ್ರವಾದ ಮನಸ್ಸು ಪಂಡಿತ ಮಂಡಳಿಯ ಕವಿಗೋಷ್ಠಿಯ ವಾತಾವರಣದಲ್ಲಿ ಬೆಳೆದ ಚೇತನ, ನವನವೋನ್ಮೇಷಶಾಲಿಯಾದ ಪ್ರತಿಭೆ ಇವೆಲ್ಲ ಕೇಶಿರಾಜನ ವ್ಯಕ್ತಿತ್ವವನ್ನು ರೂಪಿಸಿದ್ದುವು. ಅವನ ಕವಿ ಮನೋಧರ್ಮವನ್ನು ನಿರ್ದೇಶಿಸುವ ನಿದರ್ಶನಗಳಲ್ಲಿ ಕೆಲವನ್ನು ಇಲ್ಲಿ ಮಾದರಿಗೆಂಬಂತೆ ಹೇಳಬಹುದು. ಕೇಶಿರಾಜನ ಸೂತ್ರವೃತ್ತಿಗಳಿಂದ

ಕಡಲುಡಗೆಯಾದ ಪೃಥ್ವಿ ( ಧಾರಿಣಿ )  
ಕರಡೆಯ ಗಿರ್ಗಟದ ದನಿಯವೊಲ್  
ಕಜು ತಾಯ ಬಬುಯನುಮಿಯದೆ ತೆಜದಿಂ.

ಕೇಶಿರಾಜನು ಕೊಡುವ ಪ್ರಯೋಗಗಳಿಂದ.

ಕಾಮನ ಗರಟಿಗೆವರ್ಪಂತೆ ಸುತ್ತಿ ಬರ್ಪುವುಗಿಳಿಗಳ್  
ಕುಡುಮಿಂಚಂ ಮನೆದನ್ನರಪ್ಪ ಪಲರೊಳ್ವೆಂಡಿರ್  
ನೇಸಱ್ ಮೂಡಿದುದು ಬಕಂಗೆ ಮಿಮ್ತಿ ಮೂಡುವ  
ತೆಱದಿಂ

ಪ್ರಾಯಂ ಕೂಸಾದೊಡಭಿಪ್ರಾಯಂ ಕೂಸಕ್ಕುಮೆ  
ಮನದೊಳ್ ದಯೆ ಯಿಲ್ಲದವನ ಕಣ್ಣೇಂ ಪುಣ್ಮೇಂ  
ಧೂರ್ಜಟಿಯ ನೊಸಲ ಕಣ್ಣಂ ಸ್ಮರನಂದೆ ಪೊಯ್ವಂ  
ಕುಡದ ನಿಮುಗವಿಾ ಯಡಬಿಾಯ್ತೇ

ಕೇಶಿರಾಜ ಕೊಟ್ಟಿರುವ ನೂರಾರು (ಹತ್ತಿರ ಒಂದು ಸಾವಿರ) ಪ್ರಯೋಗಗಳಲ್ಲಿ ಕೆಲವಾದರೂ ಇಂದು ಅನುಪಲಬ್ಧವಾಗಿರುವ ಅವನ ಕೃತಿಗಳಿಂದ ಆಯ್ದ ಕಾವ್ಯೋಕ್ತಿಗಳಿರಬಹುದು. ಅಲ್ಲದೆ ಗುಣ ಇಲ್ಲವೇ ದೋಷಗಳಿಗೆ ಉದಾಹರಣೆ ತೋರಿಸಲು ತನ್ನ ಕಾವ್ಯಗಳಿಂದ ಕೇಶಿರಾಜ ಪ್ರಯೋಗ ಕೊಟ್ಟಿದ್ದರೆ ಅಚ್ಚರಿಯೇನಿಲ್ಲ. ಏಕೆಂದರೆ ಈ ಬಗೆಯ ಪದ್ಧತಿ ಸಂಸ್ಕೃತ

ದಲ್ಲಿತ್ತು. ಸಂಸ್ಕೃತ ಲಾಕ್ಷಣಿಕರು ಗುಣದೋಷಗಳಿಗೆ ಲಕ್ಷ್ಯಗಳನ್ನು ಕೊಡುವಾಗ 'ಯಥಾಮಮ' 'ನಯಥಾಮಮ' ಎಂಬುದಾಗಿ ತಿಳಿಸುತ್ತಿದ್ದರು. ಕೇಶಿರಾಜ ಕೂಡ ಹೀಗೆ ಮಾಡಿರಬಹುದೆಂಬುದನ್ನು ಪುಷ್ಟೀಕರಿಸಲು ಕೆಲವು ಆಧಾರಗಳಿವೆ. ಮೊದಲನೆಯದಾಗಿ ಕೇಶಿರಾಜ ತನ್ನ ಕಾವ್ಯಗಳಿಂದ ಪ್ರಯೋಗಗಳನ್ನು ಕೊಟ್ಟಿಲ್ಲವೆಂಬುದು ಖಚಿತವಾಗಿ ಹೇಳಲು ಅವನ ಕಾವ್ಯಗಳು ದೊರೆತಿಲ್ಲ. ಎರಡನೆಯದಾಗಿ ಆಕರಗಳು ತಿಳಿಯದ ಎಷ್ಟೋ ಪದ್ಯಗಳೂ ಪದ್ಯಭಾಗಗಳೂ ಶಬ್ದಮಣಿದರ್ಪಣದಲ್ಲಿವೆ. ಮೂರನೆಯದಾಗಿ ಕೇಶಿರಾಜ ಇದೇ ವ್ಯಾಕರಣದ ಸೂತ್ರಗಳಲ್ಲಿ ಬರುವ (ಸೂತ್ರ-೨) ಶಬ್ದಗಳನ್ನೇ ಪ್ರಯೋಗಗಳನ್ನಾಗಿಯೂ ಕೂಡ ಕೊಟ್ಟಿದ್ದಾನೆ. (ಸೂತ್ರ ೨೩೦ಕ್ಕೆ) ಎಂಬುದು ಗಮನಾರ್ಹ. ಅಂದರೆ ಒಂದೇ ಗ್ರಂಥದಲ್ಲಿ ಒಂದು ಸೂತ್ರದಲ್ಲಿ ಬಂದ ಶಬ್ದಗಳನೇ ಇನ್ನೊಂದು ಸೂತ್ರಕ್ಕೆ ಪ್ರಯೋಗಕ್ಕೆ ಉದಾ: ಕೊಡುವ ಸ್ವಭಾವವಿರುವ ಕೇಶಿರಾಜ ತನ್ನ ಕಾವ್ಯಗಳಿಂದ ಪ್ರಯೋಗ ಕೊಡಲಾರನೆ ? ಇನ್ನೂ ನಾಲ್ಕನೆಯದಾಗಿ ಕೇಶಿರಾಜನ ತಂದೆ ಮಲ್ಲಿಕಾರ್ಜುನ ಸಂಕಲಿಸಿದ ಸೂಕ್ತಿ ಸುಧಾರ್ಣವದಲ್ಲಿ ಕೇಶಿರಾಜನ ಕೊಂಡಾಟದ ಪದ್ಯವಿದೆ:

ಭಾವಿಪ ಸೇವಿಪಾದರಿಪ ಪೇಳಿಪ ಮೇಳಿ ಪೊನಲ್ವ ಗೆಲ್ವಸೋ
ಲ್ವಾಂ ಪೇರಮಂ ಪಡೆವ ಪೊತ್ತಿಪ ಜೊತ್ತಿ ಪವಿಲ್ವ ನೆಲ್ವಮಾ।
ಯಾವಿಗಳಪ್ಪ ಮುತ್ತ ಮುದುಗುಂಟಣಿ ಯರ್ಕಳ ಕೃತ್ರಿಮಂಗಳಂ
ಭಾವಕ ಚಕ್ರವರ್ತಿ ಕವಿ ಕೇಶವ ದೇವನೆ ಬಲ್ಲನುರ್ವಿಯೊಳ್॥

ತಂದೆ ಸಂಕಲಿಸಿದ ಗ್ರಂಥದಲ್ಲಿ ಮಗನ ಪದ್ಯ ಅದರಲ್ಲಿಯೂ ಪ್ರಶಂಸೆಯ ಪದ್ಯವೊಂದು ಸೇರಿರುವುದು ಸ್ವಾರಸ್ಯವಾಗಿದೆ. ತಂದೆಯ ಗ್ರಂಥದಲ್ಲಿ ಮಗನಬರೆಹವೂ ಸೇರಬಹುದಾದರೆ ಕೇಶಿರಾಜನೇ ಬರೆದ ವ್ಯಾಕರಣ ಗ್ರಂಥದಲ್ಲಿ ತನ್ನ ಕಾವ್ಯದಿಂದಲೇ ಎತ್ತಿಕೊಂಡ ಒಂದೆರಡು ಪ್ರಯೋಗಗಳೂ ಏಕೆ ಸೇರಬಾರದೆಂಬ ಪ್ರಶ್ನೆ ಸಹಜವಾಗಿಯೇ ಬರುತ್ತದೆ. ಆದರೆ ಮೇಲಿನ ಪದ್ಯ ಪ್ರಕ್ಷಿಪ್ತವಿರಬೇಕೆಂಬ ಅಭಿಪ್ರಾಯವಿದೆ. ಒಂದುವೇಳೆ ಇದು ಪ್ರಕ್ಷಿಪ್ತ ಪದ್ಯವೇ ಆದರೂ ಪ್ರಾಶಸ್ತ್ಯವಿದ್ದೇ ಇದೆ.

ಕೇಶಿರಾಜ ಒಂದು ಕಡೆ ಕನ್ನಡ-ಸಂಸ್ಕೃತ ಭಾಷೆಗಳಲ್ಲಿ ಪರಮ ಪಂಡಿತ, ಇನ್ನೊಂದುಕಡೆ ಕವಿ. ಅವನ ಪಂಡಿತ ಪ್ರಜ್ಞೆ ಬೆರಗುಗೊಳಿಸುತ್ತದೆ, ಅವನ ಕಾವ್ಯಜ್ಞತೆ, ಅಭಿಜಾತ ಕಾವ್ಯ ಸ್ವಾದನ ಶಕ್ತಿ ಆಹ್ಲಾದಗೊಳಿಸುತ್ತದೆ. ಕರ್ನಾಟಕ ಲಕ್ಷಣ ಶಿಕ್ಷಾಚಾರ್ಯ ಕೇಶಿಜರಾನ ವ್ಯಾಕರಣ ಶಾಸ್ತ್ರನೈಪುಣ್ಯ ಅವನ ಕಾಲದಲ್ಲೇ ಜನಜನಿತವಾಗಿತ್ತು ಸಮಕಾಲೀನ ಬಲ್ಲಿದರು ಬಂದು ಬಗೆವುಗುವಂತೆ ಕನ್ನಡ ವ್ಯಾಕರಣ ಬರೆಯಲು ಬೇಡಿದರು ಬೆಸಸಿದರು, ಅದರಂತೆ ಕೇಶಿರಾಜ ಶಬ್ದಮಣಿದರ್ಪಣ ಎಂಬ ಹೆಸರಿಟ್ಟ ಕನ್ನಡ ವ್ಯಾಕರಣ ಹೇಳಿದ್ದಾನೆ ಇವನ ಶಬ್ದಮಣಿದರ್ಪಣ ವ್ಯಾಕರಣದಲ್ಲಿ ೩೩೭ ಸೂತ್ರಗಳಿವೆ, ಅವಕ್ಕೆ ವೃತ್ತಿ ಇದೆ, ಪ್ರಯೋಗಗಳಿವೆ. ಸಂಧಿ, ನಾಮ, ಸಮಾಸ ತದ್ಧಿತ ಆಖ್ಯಾತ, ಕೃದಂತ, ಅಪಭ್ರಂಶ ಅವ್ಯಯ ಎಂಬ ಎಂಟು ಪ್ರಕರಣಗಳಿವೆ ಅಷ್ಟಾಧ್ಯಾಯಿಯನ್ನು ನೆನಪಿಗೆ ತರುವಂತೆ ಇದನ್ನು ವಿಬುಧರು ಅವಧರಿಸಬೇಕೆಂದೂ, ದೋಷಗಳಿದ್ದರೆ ಪ್ರೀತಿಯಿಂದ ತಿದ್ದಬೇಕೆಂದೂ, ದೋಷಗಳಿಲ್ಲದೆ ಗುಣಗಳಿಂದ ಕೂಡಿದ್ದರೆ ಮೆಚ್ಚಿ ಕೈಗೊಳ್ಳಬೇಕೆಂದೂ ವಿನಯದಿಂದ ವಿಜ್ಞಾಪಿಸಿದ್ದಾನೆ. ಕೇಶಿರಾಜನ ಈ ಮಾತು ಗಮನಾರ್ಹ. ಶಬ್ದಮಣಿದರ್ಪಣದಲ್ಲಿ ದೋಷಗಳು ರಾಶಿಯಾಗುವಷ್ಟು ಇವೆ ಗುಣಗಳೂ ಗಣಿಯಷ್ಟಿವೆ. ಪ್ರಾಸನಿಯಮ ಛಂದೋನಿಯಮ ಪಾಲಿಸಿ ಬರೆಯುವಾಗ ಶಬ್ದಗಳು ಅತ್ತಿತ್ತ ಚದುರಿವೆಯೆಂದೂ ಅರ್ಥಸಂದೇಹವಾಗದಂತೆ ಸೂತ್ರಗಳಿಗೆ ಅರ್ಥವೃತ್ತಿ ಬರೆದಿರುವುದಾಗಿಯೇ ಅರಿಕೆ ಮಾಡಿದ್ದಾನೆ. ಈ ಪ್ರಾಮಾಣಿಕತೆ ಪ್ರಸಂಸಾರ್ಹ.

ಕೇಶಿರಾಜ ನಡೆದುದೆ ಮಾರ್ಗ, ಪದವಿಡಲೊಡರಿಸೆದುದೆ ಭಂಗಿ, ಆತನೇ ಲೋಕದಲ್ಲಿ ಲಾಕ್ಷಣಿಕ, ಕೇಶವನಿಗಿದಿರಿಲ್ಲ, ಅಸಾಧ್ಯವಾದುದಿಲ್ಲ; ಚೆನ್ನಕೇಶವದೇವ ( ಕೇಶಿರಾಜ ) ನುದಿಸಿದ ತೆರದಲ್ಲಿ ಭಾರತಿ ನುಡಿಯುತ್ತಾಳೆ. ಒಬ್ಬನು ಇಂದು ಅಭಿನವ ಬ್ರಹ್ಮಗಡ ಎಂಬ ಹಾಗೆ ತೋರುತ್ತಾನೆ ಈ ಆತ್ಮೀಯ ವಚೋವಿಚಿತ್ರತರ ವಿದ್ಯಾವೇಶವ ಕೇಶವ ಎಂದು ಹೇಳಿರುವ ಈ ಮಾತುಗಳು ಕೇಶಿರಾಜನದೊ ಅವನ ಅಭಿಮಾನಿಗಳದೊ ತಿಳಿಯದು.

[ಮುಂದುವರೆಯುವುದು.]



ತುಮಕೂರು ಗ್ರೈನ್ ಮರ್ಚೆಂಟ್ಸ್ ಕೋ-ಆಪರೇಟಿವ್ ಬ್ಯಾಂಕ್ ಲಿ.,
ಧಾನ್ಯ ವ್ಯಾಪಾರಿಗಳ ಸಂಘದ ಸುವರ್ಣ ಮಹೋತ್ಸವದ ಕಟ್ಟಡ ಜಯಚಾಮರಾಜೇಂದ್ರ ರಸ್ತೆ, ತುಮಕೂರು-೧

ಇಂದು ಕೂಡಿಡುವ ಹಣ, ನಾಳೆಯ ಬಾಳಿನ ಭಾಗ್ಯದ ತೋರಣ

ನಮ್ಮ ಠೇವಣಾತಿ ಖಾತೆ
ತೆರೆವುದು ಭವಿಷ್ಯದ ಬಾಗಿಲು
ಬಾಳು ಆದರ್ಶಗೊಳ್ಳಲು
ಆಕರ್ಷಕ ಬಡ್ಡಿ ಪಡೆಯಲು
ನಿಮ್ಮ ಹೆಚ್ಚಿನ ಸಿರಿಯೊಳು
ನೆಚ್ಚಿನ ಬ್ಯಾಂಕಿನೊಳು
ಹರಿಸಿರಿ ಐಸಿರಿಯ ಹೊನಲು.

ಐಸಿರಿಯ ಬೆಳೆಯ ಬೆಳೆಯಿರಿ
ಅನುಪಮ ಪ್ರತಿಫಲ ಪಡೆಯಿರಿ
ಲಾಭದಾಯಕವಾಗಿಸಿ ಇಂದೇ
ಕ್ಷೇಮದಾಯಕವಾಗಿಸಿ ಇಂದೇ
ಭವಿಷ್ಯದ ಭದ್ರತೆಗೆ ಇಂದೇ
ತೊಡಗಿಸಿ ಠೇವಣಾತಿ ಖಾತೆಗೆ ಇಂದೇ.

ಠೇವಣಾತಿ ಖಾತೆ
FIXED DEPOSIT

| | | |
|---|---|---|
| 1. | 15 ದಿವಸದಿಂದ 45 ದಿವಸದ ಒಳಗೆ | 4% |
| 2. | 46 ದಿವಸದಿಂದ 90 ದಿವಸದ ಒಳಗೆ | 4½% |
| 3. | 91 ದಿವಸದಿಂದ 6 ತಿಂಗಳ ಒಳಗೆ | 5% |
| 4. | 6 ತಿಂಗಳಿಂದ 9 ತಿಂಗಳ ಒಳಗೆ | 5½% |
| 5. | 9 ತಿಂಗಳಿಂದ 1 ವರ್ಷದ ಒಳಗೆ | 6% |
| 6. | 1 ವರ್ಷದಿಂದ 3 ವರ್ಷದ ಒಳಗೆ | 7% |
| 7. | 3 ವರ್ಷದಿಂದ 5 ವರ್ಷದ ಒಳಗೆ | 9% |
| 8. | 5 ವರ್ಷದ ಮೇಲ್ಪಟ್ಟು | 11% |

ಜಿ. ಬಿ. ಚಿದಾನಂದ್ ಅಧ್ಯಕ್ಷರು
ಆರ್. ಜೆ. ಅನಂತರಾಜಯ್ಯ ಉಪಾಧ್ಯಕ್ಷರು
ಎಂ. ಸಿ. ಕ್ರಿಷ್ಣಯ್ಯ ಶೆಟ್ಟರು ಕೋಶಾಧಿಕಾರಿಗಳು
ಕೆ. ವೈ. ಶಿವಣ್ಣ, ಕಾರ್ಯದರ್ಶಿಗಳು

"SIDDAGANGA" Monthly, Sree Siddaganga Mutt. KRN Q-9
Registered with the Registrar of News papers for India under No. 17139 69

★ ವಿಜಯಾ ಬ್ಯಾಂಕ್ ಗಿಫ್ಟ್ ಚೆಕ್ಸ್ ಎಲ್ಲ ಸಂದರ್ಭಗಳಲ್ಲೂ ಉಪಯುಕ್ತ.



ರೂ. 11, ರೂ. 25, ರೂ. 51. ರೂ. 101/-ರಂತೆ
4 ಶ್ರೇಣಿಗಳಲ್ಲಿ ದೊರೆಯುತ್ತವೆ.

ನಮ್ಮ ಯಾವುದೇ ಶಾಖೆಯಲ್ಲಿ 'ವಿಜಯಾ ಬ್ಯಾಂಕ್ ಗಿಫ್ಟ್ ಚೆಕ್'ಗಾಗಿ ವಿಚಾರಿಸಿರಿ. ದೇಶಾದ್ಯಂತ 500 ಕ್ಕೂ ಹೆಚ್ಚು ಶಾಖೆಗಳಿವೆ.



# ವಿಜಯ ಬ್ಯಾಂಕ್ ಲಿಮಿಟೆಡ್

ರಿಜಿಸ್ಟರ್ಡ್ ಆಫೀಸ್
ಲೈಟ್ ಹೌಸ್ ಹಿಲ್ ರೋಡ್,
ಮಂಗಳೂರು-575003

ಆಡಳಿತ ಕಛೇರಿ
2, ರೆಸಿಡೆನ್ಸಿ ರೋಡ್
ಬೆಂಗಳೂರು-56003

ಛೇರ್ಮನ್ : ಸುಂದರರಾಮ ಶೆಟ್ಟಿ

ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ.